# ತುಳು ನಾಡಿನ ಕೋಳಿ ಅಂಕ

## ವಿವರಣೆ ಮತ್ತು ವಿಶ್ಲೇಷಣೆ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ
ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಪ್ರೌಢ ಪ್ರಬಂಧ


**ಸಂಶೋಧನೆ :**
ಕಿಶೋರ್‌ಕುಮಾರ್ ರೈ ಬಿ. ಎಸ್.

**ಮಾರ್ಗದರ್ಶನ :**
ಡಾ. ಪುರುಷೋತ್ತಮ ಬಿಳಿಮಲೆ

ಜಾನಪದ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೨೧



೧೯೯೮

# ತುಳು ನಾಡಿನ ಕೋಳಿ ಅಂಕ

## ವಿವರಣೆ ಮತ್ತು ವಿಶ್ಲೇಷಣೆ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ
ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಪ್ರೌಢ ಪ್ರಬಂಧ



ಸಂಶೋಧನೆ :
ಕಿಶೋರ್‌ಕುಮಾರ್ ರೈ ಬಿ. ಎಸ್.

ಮಾರ್ಗದರ್ಶನ :
ಡಾ. ಪುರುಷೋತ್ತಮ ಬಿಳಿಮಲೆ

ಜಾನಪದ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೨೧

೧೯೯೪



# ತುಳು ನಾಡಿನ ಕೋಳಿ ಅಂಕ

## ವಿವರಣೆ ಮತ್ತು ವಿಶ್ಲೇಷಣೆ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ
ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಪ್ರೌಢ ಪ್ರಬಂಧ



ಸಂಶೋಧನೆ :
ಕಿಶೋರ್‌ಕುಮಾರ್ ರೈ ಬಿ. ಎಸ್.

ಮಾರ್ಗದರ್ಶನ :
ಡಾ. ಪುರುಷೋತ್ತಮ ಬಿಳಿಮಲೆ

ಜಾನಪದ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೧೯೯೪



# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಕಿಶೋರ್‌ಕುಮಾರ್ ರೈ. ಬಿ.ಎಸ್. ಅವರು 'ತುಳುನಾಡಿನ ಕೋಳಿ ಅಂಕ ವಿವರಣೆ ಮತ್ತು ವಿಶ್ಲೇಷಣೆ' ಎಂಬ ಶೀರ್ಷಿಕೆಯ ಈ ಕಿರು ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ.

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಅಥವಾ ಪ್ರಬಂಧದ ಯಾವುದೇ ಭಾಗವನ್ನು ಕಿಶೋರ್ ಕುಮಾರ್ ರೈ ಅವರು ಈ ಹಿಂದೆ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: 30.9.1994. (ಡಾ. ಪುರುಷೋತ್ತಮ ಬಿಳಿಮಲೆ)

ಸ್ಥಳ : ವಿದ್ಯಾರಣ್ಯ. ಪ್ರಾಧ್ಯಾಪಕ ಮತ್ತು ಮಾರ್ಗದರ್ಶಕ

ಜಾನಪದ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ – 583221.

## ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಕಿಶೋರ್‌ಕುಮಾರ್ ರೈ. ಬಿ.ಎಸ್. ಇವರು 'ತುಳುನಾಡಿನ ಕೋಳಿ ಅಂಕ ವಿವರಣೆ ಮತ್ತು ವಿಶ್ಲೇಷಣೆ' ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ.

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಅಥವಾ ಪ್ರಬಂಧದ ಯಾವುದೇ ಭಾಗವನ್ನು ಕಿಶೋರ್ ಕುಮಾರ್ ರೈ ಅವರು ಈ ಹಿಂದೆ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: 30.9.1994. ( ಡಾ. ಪುರುಷೋತ್ತಮ ಬಿಳಿಮಲೆ )

ಸ್ಥಳ : ವಿದ್ಯಾರಣ್ಯ. ಪ್ರಾಧ್ಯಾಪಕ ಮತ್ತು ಮಾರ್ಗದರ್ಶಕ

ಜಾನಪದ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ – 583221.

# ಸಂಶೋಧಕರ ಪ್ರಮಾಣ ಪತ್ರ

'ತುಳುನಾಡಿನ ಕೋಳಿ ಅಂಕ ವಿವರಣೆ ಮತ್ತು ವಿಶ್ಲೇಷಣೆ' ಎಂಬ ಶೀರ್ಷಿಕೆಯುಳ್ಳ ಈ ಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಡಾ. ಪುರುಷೋತ್ತಮ ಬಿಳಿಮಲೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಹಿಂದೆ ಯಾವುದೇ ಪದವಿಗಳಿಗಾಗಲೀ ಅಥವಾ ಯಾವುದೇ ಇತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ ಎಂದು ಈ ಮೂಲಕ ಘೋಷಿಸುತ್ತೇನೆ.

30/9/94

ದಿನಾಂಕ: 30.9.1994.

( ಕಿಶೋರ್‌ಕುಮಾರ್ ರೈ. ಬಿ.ಎಸ್. )

ಸ್ಥಳ : ವಿದ್ಯಾರಣ್ಯ.

ಎಂ.ಫಿಲ್. ವಿದ್ಯಾರ್ಥಿ
ಜಾನಪದ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ – 583221.

## ಸಂಶೋಧಕರ ಪ್ರಮಾಣ ಪತ್ರ

'ತುಳುನಾಡಿನ ಕೋಳಿ ಅಂಕ ವಿವರಣೆ ಮತ್ತು ವಿಶ್ಲೇಷಣೆ' ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಡಾ. ಪುರುಷೋತ್ತಮ ಬಿಳಿಮಲೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಹಿಂದೆ ಯಾವುದೇ ಪದವಿಗಳಿಗಾಗಲೀ ಅಥವಾ ಯಾವುದೇ ಇತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ ಎಂದು ಈ ಮೂಲಕ ಘೋಷಿಸುತ್ತೇನೆ.

30/9/94

ದಿನಾಂಕ: 30.9.1994.

ಸ್ಥಳ : ವಿದ್ಯಾರಣ್ಯ.

( ಕಿಶೋರ್‌ಕುಮಾರ್ ರೈ. ಬಿ.ಎಸ್. )
ಎಂ.ಫಿಲ್. ವಿದ್ಯಾರ್ಥಿ
ಜಾನಪದ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ – 583221.

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ ಅವರಿಗೆ ಮತ್ತು ಕುಲಸಚಿವರಾದ ಡಾ.ಕೆ.ವಿ.ನಾರಾಯಣ ಅವರಿಗೆ,

ಮಾರ್ಗದರ್ಶನ ನೀಡಿದ ಡಾ. ಪುರುಷೋತ್ತಮ ಬಿಳಿಮಲೆ ಅವರಿಗೆ,

ಕ್ಷೇತ್ರಕಾರ್ಯ ಸಂದರ್ಭದಲ್ಲಿ ಮಾಹಿತಿ ನೀಡುವ ಮೂಲಕ ಅಧ್ಯಯನಕ್ಕೆ ಪ್ರೋತ್ಸಾಹ ವಿತ್ತ ನಿರೂಪಕರಿಗೆ,

ವಿಷಯ ಕುರಿತಂತೆ ಚರ್ಚಿಸಿದ ಅಶೋಕ ಆಳ್ವ, ವಿಶ್ವನಾಥ ಬದಿಕಾನ, ಡಾ.ಸುಬ್ಬಣ್ಣ ರೈ. ಪ್ರೊ. ಲಕ್ಷ್ಮಣ ತೆಲಗಾವಿ. ಎಸ್.ಎ. ಕೃಷ್ಣಯ್ಯ ಅವರಿಗೆ,

ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಹಕರಿಸಿದ ಸವಿತಾ ಸ್ಟುಡಿಯೋ ಪೆರ್ಲದ ಮೋಹನ್, ಇಸಾಕ್ ಅಗ್ನಾಡಿ, ಪ್ರಸನ್ನ ಪಿ.ಬಿ., ರಮೇಶ ಆಚಾರ್, ಪಿ. ಪ್ರಕಾಶ ಶೆಟ್ಟಿ, ಸುರೇಂದ್ರ ತೆಕ್ಕಟ್ಟೆ ಅವರಿಗೆ,

ಸಲಹೆಗಳನ್ನಿತ್ತ ಡಾ. ಶಿವರಾಮ ಶೆಟ್ಟಿ, ಪ್ರೊ. ಬಿ.ಎ.ವಿವೇಕ ರೈ, ಡಾ. ಚಿನ್ನಪ್ಪ ಗೌಡ, ಎ.ವಿ. ನಾವಡ, ಮಲ್ಲೇಪುರಂ, ಜಿ.ವೆಂಕಟೇಶ, ಕಿರಂ ನಾಗರಾಜ, ಓ.ಎಲ್. ನಾಗಭೂಷಣ ಸ್ವಾಮಿ, ಎಚ್.ಎಸ್. ರಾಘವೇಂದ್ರ ರಾವ್, ಧನ್ಯಕುಮಾರ ಬಿಣಜಿಗಿ, ಡಾ. ಮೋಹನ್ ಕುಂಟಾರ್ ಮತ್ತು ಅಧ್ಯಾಪಕ ವರ್ಗದವರಿಗೆ,

ಪೂರಕ ಮಾಹಿತಿಗಳನ್ನಿತ್ತು ಪ್ರೋತ್ಸಾಹಿಸಿದ ಸುಮಿಯೋ ಮೊರಿಜಿರಿ ಅವರಿಗೆ,

ಅಧ್ಯಯನಕ್ಕೆ ಪರೋಕ್ಷವಾಗಿ ಸಹಕರಿಸಿದ ಪ್ರೋತ್ಸಾಹಿಸಿದ ಶ್ರೀಮತಿ ಅಂಬಿಕಾ ರೈ, ರಘುರಾಮ ಆಳ್ವ, ಶಂಪಾ ದೈತೋಟ, ಸಂಜೀವ ಸಸ್ಕಿಸ, ಧನಂಜಯ, ಮೋಹನ ಶೆಟ್ಟಿ, ಮಾಧವ ಪೆರಾಜೆ, ಜತ್ತುನಿಡ್ಲೆ, ಡಿ.ಎಸ್. ನಾರಾಯಣ, ಗುರುನಾಥ ಹೂಗಾರ, ಬಸವ ರಾಜಯ್ಯ ಮಠದ, ಎಸ್.ವೈ. ಸೋಮಶೇಖರ, ಪಿ.ಆರ್. ರೇಣುಕಾಪ್ರಸಾದ್ ಮತ್ತು ಮಿತ್ರರಿಗೆ,

ಅಧ್ಯಯನಕ್ಕೆ ಸಹಕಾರ ಮತ್ತು ಪ್ರೋತ್ಸಾಹವನ್ನಿತ್ತ ಅಪ್ಪ, ಅಮ್ಮ, ತಂಗಿ ಅವರಿಗೆ,

ರೇಖಾಚಿತ್ರವನ್ನು ರಚಿಸಿಕೊಟ್ಟ ಕೆ. ಮಕಾಳಿ ಅವರಿಗೆ,

ಅಂದವಾಗಿ ಬೆರಳಚ್ಚು ಮಾಡಿಕೊಟ್ಟ ಕುಮಾರಿ ರಜನಿ ಅವರಿಗೆ,

ಹೃತ್ಪೂರ್ವಕ ಕೃತಜ್ಞತೆಗಳು.

ಕಿಶೋರಕುಮಾರ್ ರೈ. ಶೇಣಿ

ವಿದ್ಯಾರಣ್ಯ
30.9.1994.

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ ಅವರಿಗೆ ಮತ್ತು ಕುಲಸಚಿವರಾದ ಡಾ.ಕೆ.ವಿ.ನಾರಾಯಣ ಅವರಿಗೆ,

ಮಾರ್ಗದರ್ಶನ ನೀಡಿದ ಡಾ. ಪುರುಷೋತ್ತಮ ಬಿಳಿಮಲೆ ಅವರಿಗೆ,

ಕ್ಷೇತ್ರಕಾರ್ಯ ಸಂದರ್ಭದಲ್ಲಿ ಮಾಹಿತಿ ನೀಡುವ ಮೂಲಕ ಅಧ್ಯಯನಕ್ಕೆ ಪ್ರೋತ್ಸಾಹವಿತ್ತ ನಿರೂಪಕರಿಗೆ,

ವಿಷಯ ಕುರಿತಂತೆ ಚರ್ಚಿಸಿದ ಅಶೋಕ ಆಳ್ವ, ವಿಶ್ವನಾಥ ಬದಿಕಾನ, ಡಾ.ಸುಬ್ಬಣ್ಣ ರೈ, ಪ್ರೊ. ಲಕ್ಷ್ಮಣ ತೆಲಗಾವಿ, ಎಸ್.ಎ. ಕೃಷ್ಣಯ್ಯ ಅವರಿಗೆ,

ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಹಕರಿಸಿದ ಸವಿತಾ ಸುಬ್ಬಡಿಯೋ, ಪೆರ್ಲದ ಮೋಹನ್, ಇಸಾಕ್ ಅಗ್ನಾಡಿ, ಪ್ರಸನ್ನ ಪಿ.ಬಿ., ರಮೇಶ ಆಚಾರ್, ಪಿ. ಪ್ರಕಾಶ ಶೆಟ್ಟಿ, ಸುರೇಂದ್ರ ತೆಕ್ಕಟ್ಟೆ ಅವರಿಗೆ,

ಸಲಹೆಗಳನ್ನಿತ್ತ ಡಾ. ಶಿವರಾಮ ಶೆಟ್ಟಿ, ಪ್ರೊ. ಬಿ.ಎ.ವಿವೇಕ ರೈ, ಡಾ. ಚಿನ್ನಪ್ಪ ಗೌಡ, ಎ.ವಿ. ನಾವಡ, ಮಲ್ಲೇಪುರಂ, ಜಿ.ವೆಂಕಟೇಶ, ಕಿರಂ ನಾಗರಾಜ, ಓ.ಎಲ್. ನಾಗಭೂಷಣ ಸ್ವಾಮಿ, ಎಚ್.ಎಸ್. ರಾಘವೇಂದ್ರ ರಾವ್, ಧನ್ಯಕುಮಾರ ಮಿಣಜಿಗಿ, ಡಾ. ಮೋಹನ್ ಕುಂಟಾರ್ ಮತ್ತು ಅಧ್ಯಾಪಕ ವರ್ಗದವರಿಗೆ,

ಪೂರಕ ಮಾಹಿತಿಗಳನ್ನಿತ್ತು ಪ್ರೋತ್ಸಾಹಿಸಿದ ಸುಮಿಯೋ ಮೊರಿಜಿರಿ ಅವರಿಗೆ,

ಅಧ್ಯಯನಕ್ಕೆ ಪರೋಕ್ಷವಾಗಿ ಸಹಕರಿಸಿದ ಪ್ರೋತ್ಸಾಹಿಸಿದ ಶ್ರೀಮತಿ ಅಂಬಿಕಾ ರೈ, ರಘುರಾಮ ಆಳ್ವ, ಶಂಪಾ ದೈತೋಟ, ಸಂಜೀವ ಸಸ್ಮಿಸ, ಧನಂಜಯ, ಮೋಹನ ಶೆಟ್ಟಿ, ಮಾಧವ ಪೆರಾಜೆ, ಜತುನಿಡ್ಲೆ, ಡಿ.ಎಸ್. ನಾರಾಯಣ, ಗುರುನಾಥ ಹೂಗಾರ, ಬಸವರಾಜಯ್ಯ ಮಠದ, ಎಸ್.ವೈ. ಸೋಮಶೇಖರ, ಪಿ.ಆರ್. ರೇಣುಕಾಪ್ರಸಾದ್ ಮತ್ತು ಮಿತ್ರರಿಗೆ,

ಅಧ್ಯಯನಕ್ಕೆ ಸಹಕಾರ ಮತ್ತು ಪ್ರೋತ್ಸಾಹವನ್ನಿತ್ತ ಅಪ್ಪ, ಅಮ್ಮ, ತಂಗಿ ಅವರಿಗೆ,

ರೇಖಾಚಿತ್ರವನ್ನು ರಚಿಸಿಕೊಟ್ಟ ಕೆ. ಮುಕಾಳಿ ಅವರಿಗೆ,

ಅಂದವಾಗಿ ಬೆರಳಚ್ಚು ಮಾಡಿಕೊಟ್ಟ ಕುಮಾರಿ ರಜನಿ ಅವರಿಗೆ,

ಹೃತ್ಪೂರ್ವಕ ಕೃತಜ್ಞತೆಗಳು.

ವಿದ್ಯಾರಣ್ಯ
30.9.1994.

ಕಿಶೋರಕುಮಾರ್ ರೈ. ಶೇಣಿ

# ಪರಿವಿಡಿ

## ಅಧ್ಯಾಯ ಒಂದು

---

### 1. <u>ಹಿನ್ನೆಲೆ</u>

1.1: ಪ್ರಸ್ತಾವನೆ

1.2: ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

1.3: ಅಧ್ಯಯನದ ಆಕರಗಳು

1.4: ಕೋಳಿಅಂಕದ ಉಲ್ಲೇಖಗಳು ಮತ್ತು ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

# 1. ಹಿನ್ನೆಲೆ

1.1: ಪ್ರಸ್ತಾವನೆ : ಈಚಿನ ದಿನಗಳಲ್ಲಿ ಜಾನಪದ ಅಧ್ಯಯನವು ಹೆಚ್ಚು ಹೆಚ್ಚು ಜನಪ್ರಿಯವಾಗುತ್ತಾ ಹೋಗುತ್ತಿದೆ. ಹೆಚ್ಚು ಹೆಚ್ಚು ಜನರು ಈ ಕ್ಷೇತ್ರದತ್ತ ಗಮನ ಹರಿಸುತ್ತಿದ್ದಾರೆ. ಮೌಖಿಕ ಸಾಮಗ್ರಿಗಳನ್ನು ಆಧರಿಸಿ ಕೊಂಡು ವಿದ್ವಾಂಸರು ನಡೆಸಿರುವ ಚರ್ಚೆಗಳು ಭಾಷೆ ಮತ್ತು ಸಂಸ್ಕೃತಿಯ ಬಗೆಗೆ ಹೊಸ ಬೆಳಕನ್ನು ಚೆಲ್ಲುವಲ್ಲಿ ಯಶಸ್ವಿಯಾಗಿವೆ.

ಕನ್ನಡ ಜಾನಪದ ಅಧ್ಯಯನದ ಆರಂಭಿಕ ಪ್ರಯತ್ನಗಳೆಲ್ಲ ಜನಪದ ಸಾಹಿತ್ಯ ದತ್ತಲೇ ಕೇಂದ್ರೀಕೃತಗೊಂಡಿತ್ತು. ಸಾಹಿತ್ಯದ ಅಧ್ಯಾಪಕರೇ ಜಾನಪದದಲ್ಲಿ ಕೆಲಸ ಮಾಡಿದರಿಂದ ಹಾಗಾಗುವುದು ಅನಿವಾರ್ಯವಾಗಿತ್ತು. ಅನಂತರದ ದಿನಗಳಲ್ಲಿ ಜಾನಪದ ಅಧ್ಯಯನ ನಿಧಾನವಾಗಿ ಪ್ರದರ್ಶನ ಕಲೆಗಳ ಅಧ್ಯಯನದತ್ತ ವಾಲಿ ಕೊಂಡಿತು. ಆಕರ್ಷಕವಾದ ಪ್ರದರ್ಶಕ ಕಲೆಗಳು ಅಧ್ಯಯನ ಕಾರರಿಗೆ ಬೇಕಾದಷ್ಟು ಸಾಮಗ್ರಿಗಳನ್ನು ತನ್ನೊಳಗಿಂದಲೇ ಒದಗಿಸಿಕೊಟ್ಟಿತ್ತು. ಈಚಿನ ದಿನಗಳಲ್ಲಿ ಅಧ್ಯಯನಕಾರರು ಸಾಮಾಜಿಕ ಆಚರಣೆಗಳತ್ತ ತಮ್ಮ ಗಮನವನ್ನು ಹರಿಸುತ್ತಿದ್ದಾರೆ. ಬೇರೆ ಬೇರೆ ಬುಡಕಟ್ಟುಗಳು ಮತ್ತು ಜಾತಿ ಸಮಾಜಕ್ಕೆ ಸೇರಿದ ಜನರ ಬದುಕಿನ ವಿವಿಧ ರೀತಿ ನೀತಿಗಳ ಬಗೆಗೆ ಅನೇಕರು ಈಗಲೂ ಅಧ್ಯಯನ ನಡೆಸುತ್ತಿದ್ದಾರೆ. ಹೀಗೆ ನೋಡಿದಾಗ ಭೌತಿಕ ಜಾನಪದ ಮತ್ತು ವಿಷಯನಿಷ್ಠ ಜಾನಪದದ ಬಗೆಗೆ ಅಷ್ಟಾಗಿ ಗಮನ ಹರಿಯದೆ ಇರುವ ಸಂಗತಿ ಎದ್ದು ಕಾಣುತ್ತದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನಕ್ಕೆ 'ತುಳುನಾಡಿನ ಕೋಳಿಅಂಕ' ವನ್ನು ಆಧರಿಸಿ ಕೊಳ್ಳಲಾಗಿದೆ. ಕೋಳಿಅಂಕಕ್ಕೆ ಸಂಬಂಧಿಸಿದಂತೆ ಲಭ್ಯವಿರುವ ಎಲ್ಲ ಮಾಹಿತಿಗಳನ್ನು ಕಲೆ ಹಾಕಿ ಅಧ್ಯಯನ ಮಾಡುವುದು ಇಲ್ಲಿನ ಪ್ರಧಾನ ಉದ್ದೇಶ. ಹೀಗೆ ಮಾಡುವಾಗ ಕೋಳಿಅಂಕಕ್ಕೆ ಸಂಬಂಧಿಸಿದ ಎಲ್ಲ ಮಾಹಿತಿಗಳು ಒಂದೆಡೆ ಕ್ರೋಢೀಕರಣಗೊಳ್ಳುತ್ತದೆ ನಿಜ. ಆದರೆ ಹಾಗೆ ಮಾಡಿದಾಗ ಕೋಳಿಅಂಕವನ್ನು ತುಳುನಾಡಿನ ಸಂಸ್ಕೃತಿಯ ಸಮಗ್ರ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳಲು ತೀರಾ ಕಷ್ಟವಾಗುತ್ತದೆ. ಈ ಅರಿವಿನಲ್ಲಿಯೆ ಕೋಳಿಅಂಕದ ಬಗೆಗೆ ವಿವರಗಳನ್ನು ಸಂಗ್ರಹಿಸಿ

ಲಾಗಿದೆ. ಮತ್ತು ಅವುಗಳನ್ನು ಸೂಕ್ತವಾಗಿ ವರ್ಗೀಕರಿಸಿಕೊಂಡು ಮಂಡಿಸಲಾಗಿದೆ.

<u>1.2: ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ</u> : ವಿಷಯನಿಷ್ಠ ಜಾನಪದಕ್ಕೆ ತನ್ನದೆ ಆದ ಮಿತಿಗಳಿವೆ ಮತ್ತು ಸಾಧ್ಯತೆಗಳಿವೆ. ಒಂದು ನಿರ್ದಿಷ್ಟ ವಿಷಯಕ್ಕೆ ಸಂಬಂಧಿಸಿದಂತೆ ಲಭಸುವ ಎಲ್ಲ ಮಾಹಿತಿಗಳನ್ನು ಕಲೆ ಹಾಕಲು ಬೇಕಾದ ಕೇಂದ್ರಬಿಂದು ಅಧ್ಯಯನಕ್ಕೆ ಲಭಸುವುದು ಇಲ್ಲಿಯ ಪ್ರಧಾನ ಗುಣವಾಗಿದೆ. ಆದರೆ ಹಾಗೆ ಸಂಗ್ರಹಿಸಿದ ಮಾಹಿತಿಗಳು ಸ್ವತಂತ್ರವೆಂಬಂತೆ ಮಂಡಿತವಾಗುವುದು ಇದರ ದೌರ್ಬಲ್ಯವಾಗಿದೆ. ಇಷ್ಟಿದ್ದರೂ ಪ್ರಸ್ತುತ ಪ್ರಬಂಧದಲ್ಲಿ ವಿಷಯನಿಷ್ಠ ಜಾನಪದದ ಮಾದರಿಗಳನ್ನು ಅನುಸರಿಸಲಾಗಿದೆ. ಕೋಳಿಅಂಕವನ್ನು ಕೇಂದ್ರವಾಗಿರಿಸಿಕೊಂಡು ಅದರ ಸುತ್ತ ಹಬ್ಬಿರುವ ಅನೇಕ ವಿವರಗಳನ್ನು ಕಲೆ ಹಾಕಲಾಗಿದೆ. ಈ ವಿವರಗಳ ಹಿಂದಿನ ಸಾಮಾಜಿಕ ತರ್ಕವನ್ನು ಗ್ರಹಿಸಲು ಯತ್ನಿಸಲಾಗಿದೆ. ಇಂತಹ ಯತ್ನಗಳು ಸಂಸ್ಕೃತಿಯ ಸಮಗ್ರ ಚಿತ್ರದ ಒಂದು ಮುಖ್ಯ ಭಾಗವಾಗಿ ಕ್ರಿಯಾಶೀಲವಾಗಿರುವುದಂತು ನಿಜ. ಈ ಕ್ರಿಯಾಶೀಲತೆಯನ್ನು ಅರ್ಥ ಮಾಡಿಕೊಳ್ಳಲು ಇಲ್ಲಿ ಪ್ರಯತ್ನಿಸಲಾಗಿದೆ.

ಕೋಳಿಅಂಕವು ಜಗತ್ತಿನಾದ್ಯಂತ ಜನಪ್ರಿಯವಾಗಿದೆ. ಅದರಲ್ಲಿಯೂ ದಕ್ಷಿಣ ಏಷ್ಯದ ರಾಷ್ಟ್ರಗಳಲ್ಲಿ ಅದು ಬಹಳ ಜನಪ್ರಿಯವಾಗಿದೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ತುಳುನಾಡಿನಲ್ಲಿ ಮಾತ್ರ ಜನಪ್ರಿಯವಾಗಿರುವ ಕೋಳಿಅಂಕಗಳನ್ನು ಗಮನದಲ್ಲಿರಿಸಿಕೊಳ್ಳಲಾಗಿದೆ. ಇದಕ್ಕೆ ಮುಖ್ಯ ಕಾರಣ ಸೀಮಿತವಾದ ಕಾಲಾವಧಿ. ಇಷ್ಟಿದ್ದರೂ ತುಳುನಾಡಿನ ಬೇರೆ ಬೇರೆ ಕಡೆಗಳಲ್ಲಿ ಕ್ಷೇತ್ರಕಾರ್ಯ ಮಾಡಿ ವಿವರವನ್ನು ಸಂಗ್ರಹಿಸಲಾಗಿದೆ. ಅಗತ್ಯ ಬಿದ್ದಲ್ಲಿ ಕೋಳಿಅಂಕವನ್ನು ಮತ್ತೆ ಮತ್ತೆ ನೋಡಿ ವಿವರಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ. ಕೋಳಿಅಂಕದಲ್ಲಿ ನುರಿತ ಹಿರಿಯರನ್ನು ಸಂದರ್ಶಿಸಿ ಅವರಿಂದಲೂ ಬೇಕಾದ ಮಾಹಿತಿಗಳನ್ನು ಪಡೆದು ಕೊಳ್ಳಲಾಗಿದೆ. ಬೇರೆ ಬೇರೆ ಪ್ರದೇಶದವರು ಕೋಳಿಅಂಕಕ್ಕೆ ಹೇಗೆ ಪ್ರತಿಕ್ರಿಯಿಸುತ್ತಾರೆ ಎಂಬುದನ್ನು ಪರಿಶೀಲಿಸಿ ನೋಡಲಾಗಿದೆ. ಕೋಳಿಅಂಕದಲ್ಲಿ ಪಾಲ್ಗೊಳ್ಳುವ ವಿವಿಧ ಜಾತಿಗಳ ಜನರನ್ನು ಸಂದರ್ಶಿಸಲಾಗಿದೆ.

ಸಂಗ್ರಹಿಸಲಾದ ವಿವರಗಳನ್ನು ವರ್ಗೀಕರಿಸಿಕೊಂಡು ವಿಷಯವು ಮಂಡನೆ ಮಾಡುವಾಗ ವಿವರಣಾತ್ಮಕವಾದ ಕ್ರಮವನ್ನು ಅನುಸರಿಸಲಾಗಿದೆ. ವಿವರಗಳನ್ನು ಹೆಚ್ಚು ವ್ಯಾಖ್ಯಾನಗಳಿಗೆ ಒಳಪಡಿಸಿಲ್ಲ. ಯಾಕೆಂದರೆ ಕೋಳಿಅಂಕದ ಬಗೆಗೆ ಸಮರ್ಪಕವಾದ ವಿವರ ನೀಡುವ ಕೃತಿಗಳೇ ಇನ್ನೂ ಪ್ರಕಟವಾಗಿಲ್ಲ. ಹೀಗಿರುವಾಗ ಸಮಗ್ರ ವಿವರ ನೀಡುವುದೇ ಮುಖ್ಯ ಕೆಲಸವಾಗಿ ಬಿಡುತ್ತದೆ. ಈ ಅರಿವಿನಲ್ಲಿ ಪ್ರಬಂಧದಲ್ಲಿ ವಿವರಣಾತ್ಮಕವಾದ ವಿಧಾನವನ್ನು ಅನುಸರಿಸಲಾಗಿದೆ.

## 1.3: ಅಧ್ಯಯನದ ಆಕರಗಳು

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಎರಡು ರೀತಿಯ ಆಕರಗಳನ್ನು ಪ್ರಮುಖವಾಗಿ ಬಳಸಿಕೊಳ್ಳಲಾಗಿದೆ. ಅವುಗಳೆಂದರೆ :

ಅ) ಕ್ಷೇತ್ರಕಾರ್ಯ ಮಾಹಿತಿಗಳು

ಆ) ಲಿಖಿತ ಆಕರಗಳು

1.3.1: ಕ್ಷೇತ್ರಕಾರ್ಯ ಮಾಹಿತಿಗಳು: ಈ ಪ್ರೌಢ ಪ್ರಬಂಧಕ್ಕೆ ಬೇಕಾದ ಪ್ರಾಥಮಿಕ ಮಾಹಿತಿಗಳನ್ನು ವ್ಯಾಪಕವಾದ ಕ್ಷೇತ್ರಕಾರ್ಯದಿಂದ ಸಂಗ್ರಹಿಸಿಕೊಳ್ಳಲಾಗಿದೆ. ಪ್ರಬಂಧದ ವ್ಯಾಪ್ತಿಯನ್ನು ತುಳುನಾಡಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಆದರೆ ಇಡೀ ತುಳುನಾಡಿನಲ್ಲಿ ಏಕರೂಪದ ಕೋಳಿ ಅಂಕಗಳಿರಲು ಬಹುಶಃ ಸಾಧ್ಯವಿಲ್ಲ. ತುಳುನಾಡಿನ ಒಳಗಡೆಗೆ ಮತ್ತೆ ಪ್ರಾದೇಶಿಕ ವ್ಯತ್ಯಾಸಗಳಿರಲು ಸಾಧ್ಯ. ಈ ಕಾರಣಕ್ಕೆ ಮಾಹಿತಿಗಳನ್ನು ಸಂಗ್ರಹಿಸುವಾಗ ಪ್ರಾದೇಶಿಕ ವ್ಯತ್ಯಾಸಗಳನ್ನು ಗಮನದಲ್ಲಿರಿಸಿಕೊಳ್ಳಲಾಗಿದೆ. ತುಳುನಾಡಿನ ಉತ್ತರ ಭಾಗದಲ್ಲಿರುವ ಉಡುಪಿ, ಕುಂದಾಪುರ, ಬಸ್ರೂರುಗಳಿಂದ, ಪೂರ್ವ ಭಾಗದಲ್ಲಿರುವ ಪುತ್ತೂರು, ಸುಳ್ಯಗಳಿಂದ ಮತ್ತು ದಕ್ಷಿಣ ಭಾಗದಲ್ಲಿರುವ ಕಾಸರಗೋಡು, ಕುಂಬಳೆ ಬದಿಯಡ್ಕಗಳಿಂದ ವ್ಯಾಪಕವಾಗಿ ಮಾಹಿತಿ ಸಂಗ್ರಹಿಸಲಾಗಿದೆ. ಇದರ ಜೊತೆಗೆ ತುಳುನಾಡಿನ ಪ್ರಮುಖ ಕೇಂದ್ರಗಳಾದ ಬಂಟ್ವಾಳ, ಕಾರ್ಕಳ, ಮೂಡಬಿದರೆ, ಬೆಳ್ತಂಗಡಿ (ಕ್ಷೇತ್ರಕಾರ್ಯ ಮಾಡಿದ ಸ್ಥಳಗಳ ಮಾಹಿತಿಗಾಗಿ ನೋಡಿ ಭೂಪಟ ಸಂಖ್ಯೆ.1) ಸುರತ್ಕಲ್, ಪೆರ್ಲ ಮೊದಲಾದ ಸ್ಥಳಗಳಿಂದಲೂ ಕೋಳಿ ಅಂಕದ ಬಗೆಗೆ ವಿವರಗಳನ್ನು ಸಂಗ್ರಹಿಸಲಾಗಿದೆ. ಪ್ರಮುಖ ಕೋಳಿ ಅಂಕಗಳಲ್ಲಿ ಪಾಲ್ಗೊಂಡ ಹಿರಿಯ ವ್ಯಕ್ತಿಗಳನ್ನು ಸಂದರ್ಶಿಸಿ ಅವರಿಂದ ಮಾಹಿತಿಗಳನ್ನು ಕಲೆಹಾಕಿಕೊಳ್ಳಲಾಗಿದೆ. ಕೆಲವು ಬಾರಿ ಪತ್ರಗಳನ್ನು ಬರೆದು ಅಗತ್ಯವಿರುವ ವಿವರಗಳನ್ನು ತರಿಸಿಕೊಳ್ಳಲಾಗಿದೆ.




ಕ್ಷೇತ್ರಕಾರ್ಯ ಮಾಡಿದ ಸ್ಥಳಗಳು ( ಭೂಪಟ ಸಂಖ್ಯೆ:1 )

ಈಚಿನ ದಿನಗಳಲ್ಲಿ ಕೋಳಿ ಅಂಕವನ್ನು ಸರಕಾರ ನಿಷೇಧಿಸಿದೆ. ಆದರೂ ಜನ ಕೋಳಿ ಅಂಕವನ್ನು ನಿಲ್ಲಿಸಿಲ್ಲ. ಇದರ ಪರಿಣಾಮ ಮಾತ್ರ ಬಹಳ ಸ್ಪಷ್ಟ. ಅದೆಂದರೆ ಕ್ಷೇತ್ರ ಕಾರ್ಯಕರ್ತರನ್ನು ಸಂಶಯಿಸುವುದು. ಅನೇಕ ಬಾರಿ ಸರಕಾರದ ಪ್ರತಿನಿಧಿ ಎಂದು ಭಾವಿಸಿ ಜನರು ಮಾಹಿತಿಗಳನ್ನು ನೀಡಲು ಹಿಂಜರಿಯುವುದುಂಟು. ಜೊತೆಗೆ ಕೋಳಿ ಅಂಕದಲ್ಲಿ ಜನ ಎಷ್ಟು ತಲ್ಲೀನರಾಗಿರುತ್ತಾರೆ ಎಂದರೆ ಆ ಹೊತ್ತಿನಲ್ಲಿ ಅವರಿಂದ ಯಾವ ಮಾಹಿತಿಯನ್ನಾದರೂ ಸಂಗ್ರಹಿಸುವುದು ಕಷ್ಟ. ಆದ್ದರಿಂದ ಈ ಹಂತದಲ್ಲಿ ಕೇವಲ ವೀಕ್ಷಣೆಯಷ್ಟೆ ಪ್ರಧಾನವಾಗುತ್ತದೆ. ಅಂಕದ ಉತ್ಸಾಹ ಕಳೆದ ನಂತರವೆ ಜನರನ್ನು ಆ ಕುರಿತು ಮಾತನಾಡಿಸಲು ಸಾಧ್ಯ. ಈ ಎಲ್ಲ ಮಿತಿಗಳ ನಡುವೆಯೂ ಪ್ರಸ್ತುತ ಪ್ರೌಢ ಪ್ರಬಂಧಕ್ಕೆ ಬೇಕಾದ ಪ್ರಾಥಮಿಕ ಮಾಹಿತಿಗಳನ್ನು ಕ್ಷೇತ್ರಕಾರ್ಯದಿಂದಲೇ ಸಂಗ್ರಹಿಸಲಾಗಿದೆ.

ಸಾಮಾನ್ಯವಾಗಿ ಸಂದರ್ಶನಕ್ಕೆ ಹಿರಿಯ ವ್ಯಕ್ತಿಗಳನ್ನೇ ಆಯ್ದುಕೊಳ್ಳಲಾಗಿದೆಯಾದರೂ ಅಗತ್ಯ ಬಿದ್ದಾಗ ಹೊಸ ತಲೆಮಾರಿಗೆ ಸೇರಿದ ಯುವಕರನ್ನೂ ಸಂದರ್ಶಿಸಲಾಗಿದೆ. ಈ ನಿರೂಪಕರು ವಿವಿಧ ಪ್ರದೇಶಗಳಿಗೆ ಮತ್ತು ವಿವಿಧ ಜಾತಿಗಳಿಗೆ ಸೇರಿರುವಂತೆ ಎಚ್ಚರ ವಹಿಸಲಾಗಿದೆ. (ನಿರೂಪಕರ ವಿವರಗಳಿಗೆ ನೋಡಿ ಅನುಬಂಧ–2) ಈ ನಿಟ್ಟಿನಲ್ಲಿ ಕ್ಷೇತ್ರಕಾರ್ಯವು ಸಮಗ್ರವೂ, ಸಮರ್ಪಕವೂ ಆಗಿರುವಂತೆ ನೋಡಿಕೊಳ್ಳಲಾಗಿದೆ.

1.3.2: ಲಿಖಿತ ಆಕರಗಳು: ಕೋಳಿ ಅಂಕಕ್ಕೆ ಸಂಬಂಧಿಸಿದಂತೆ ಪೂರಕ ಮಾಹಿತಿಗಳನ್ನು ಈ ಕೆಳಗಿನ ಆಕರಗಳಿಂದ ಸಂಗ್ರಹಿಸಿಕೊಳ್ಳಲಾಗಿದೆ.

ಅ) ಸಂಸ್ಕೃತ ಮತ್ತು ಕನ್ನಡ ಕಾವ್ಯಗಳು.

ಆ) ವಿಶ್ವಕೋಶಗಳು ಮತ್ತು ನಿಘಂಟುಗಳು.

ಇ) ಮಹಾ ಪ್ರಬಂಧಗಳು.

ಈ) ಸ್ವತಂತ್ರ ಕೃತಿಗಳು ಮತ್ತು ಬಿಡಿಲೇಖನಗಳು.

ಮೇಲಿನ ಆಕರಗಳಲ್ಲಿ ಕೋಳಿ ಅಂಕದ ಬಗೆಗೆ ಅಲ್ಪಸ್ವಲ್ಪ ಮಾಹಿತಿಗಳು ದೊರೆತಿದ್ದು ಪ್ರಸ್ತುತ ಪ್ರಬಂಧದ ನಿರೂಪಣೆಗೆ ಅವನ್ನು ಅಗತ್ಯವಿದ್ದಲ್ಲಿ ಬಳಸಿ ಕೊಳ್ಳಲಾಗಿದೆ ಮತ್ತು ಅವುಗಳನ್ನು ಉಲ್ಲೇಖಿಸಲಾಗಿದೆ.

## 1.4: ಕೋಳಿಅಂಕದ ಉಲ್ಲೇಖಗಳು ಮತ್ತು ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ :

ಕೋಳಿ ಅಂಕದ ಬಗೆಗೆ ಸದ್ಯ ಭಾರತದಲ್ಲಿ ನಮಗೆ ದೊರಕುವ ಅತ್ಯಂತ ಪ್ರಾಚೀನ ಉಲ್ಲೇಖವೆಂದರೆ ಕ್ರಿಸ್ತಶಕದ ಸುಮಾರಿಗೆ ರಚಿತವಾದ ವಾತ್ಸ್ಯಾಯನನ ಕಾಮಸೂತ್ರದಲ್ಲಿ ಬಂದಿರುವ ಮಾತುಗಳು. ಕಾಮಸೂತ್ರದ ನಾಗರಿಕ ವೃತ್ತದಲ್ಲಿನ ಉದ್ಯಾನ ಗಮನ ಎಂಬ ಭಾಗದಲ್ಲಿ ಈ ಕೆಳಗಿನ ಮಾತುಗಳು ಬರುತ್ತವೆ. ''ನಾಗರಕರು ಕಾಲ ಕಾಲಕ್ಕೆ ಸಮೀಪದ ಅರಣ್ಯ ಪ್ರದೇಶ ಅಥವಾ ತೋಟಗಳಿಗೆ ಹೋಗಿಬರುವ ಕಾರ್ಯಕ್ರಮವಿಟ್ಟುಕೊಳ್ಳಬೇಕು. ಪೂರ್ವನಿಶ್ಚಿತ ಸ್ಥಳಕ್ಕೆ ಮಿತ್ರರು ಮತ್ತು ವಾರಾಂಗನೆಯರೊಂದಿಗೆ ಅಶ್ವಾರೂಢರಾಗಿ ಬೆಳಿಗ್ಗೆಯೇ ಹೋಗಬೇಕು. ಅಲ್ಲಿ ಬೇಟೆ ಅಥವಾ ಕೋಳಿಕಾಳಗ ಮೊದಲಾದ ಮನರಂಜನೆಯಲ್ಲಿ ತೊಡಗಬೇಕು. ನದಿ, ಜಲಾಶಯಗಳಿರುವಲ್ಲಿ ದೋಣಿಯಲ್ಲಿ ವಿಹರಿಸಬೇಕು, ಕ್ರೂರ ಪ್ರಾಣಿಗಳೂ, ಅಪಾಯಕರ ಸಸ್ಯಗಳೂ ಇಲ್ಲದ ಜಲಾಶಯಗಳಲ್ಲಿ ಈಜಾಡಬಹುದು, ಜಲಕ್ರೀಡೆ ನಡೆಸಬಹುದು. ಹೀಗೆ ಕಾಲ ಕಳೆದು ಅಲ್ಲಿ ದೊರೆಯುವ ಹೂವು, ಸಿದ್ಧ ಪಡಿಸಿದ ಹಾರಗಳನ್ನು ಸಂಗ್ರಹಿಸಿಕೊಂಡು ಹಿಂತಿರುಗಬೇಕು. (ಉದ್ಧೃತ: ಶ್ರೀಧರಮೂರ್ತಿ.ಮ. 1980:63). ಈ ಉಲ್ಲೇಖನದ ಪ್ರಕಾರ ಕ್ರಿಸ್ತಶಕರಾಂಭದ ದಶಕಗಳಲ್ಲಿ ಕೋಳಿ ಅಂಕವು ಅಸ್ತಿತ್ವದಲ್ಲಿತ್ತು ಮತ್ತು ಅದು ಮನರಂಜನೆಯ ಸಾಧನವಾಗಿತ್ತು ಎಂದು ತಿಳಿಯಬಹುದು.

ಆರನೆಯ ಶತಮಾನದಲ್ಲಿ ಮಹಾಕವಿದಂಡಿ ಬರೆದ 'ದಶಕುಮಾರ ಚರಿತಮ್' ಗದ್ಯಕಾವ್ಯದ ಐದನೆಯ ಉಚ್ಛ್ವಾಸದ 'ಪ್ರಮತಿ ಚರಿತಮ್' ನಲ್ಲಿಯೂ ಕೋಳಿ ಅಂಕದ ಉಲ್ಲೇಖ ಇರುವುದನ್ನು ಕಾಣಬಹುದು. ಅವನು ಹೀಗೆ ಬರೆದಿರುತ್ತಾನೆ

'' ನಾನು (ಪ್ರಮತಿ) ಕಾಮದೇವನ ವಶವರ್ತಿಯಾಗಿ ಶ್ರಾವಸ್ತಿಯತ್ತ ಹೊರಟೆನು. ದಾರಿಯಲ್ಲೊಂದೆಡೆ ದೊಡ್ಡ ವ್ಯಾಪಾರಿಗಳ ಬೀದಿಯಲ್ಲಿ ಕೋಳಿಗಳ ಯುದ್ಧ ಕೋಲಾಹಲವು ನಡೆಯುತ್ತಿತ್ತು. ನಾನು ಅಲ್ಲಿಗೆ ಹೋಗಿ ನಿಂತುಕೊಂಡು ಸ್ವಲ್ಪ ನಕ್ಕೆ. ನನ್ನ ಸಮೀಪದಲ್ಲಿದ್ದ ಓರ್ವ ಚತುರನಾದ ಮುದಿ ಬ್ರಾಹ್ಮಣನು ಮೆಲ್ಲಗೆ ನಾನು ನಕ್ಕ ಕಾರಣವನ್ನು ಕೇಳಿದನು. ಆಗ ನಾನು ಹೀಗೆಂದೆ – 'ಅದು ಹೇಗೆ ಅವಿವೇಕದಿಂದ ಬಲ ಮತ್ತು ಪ್ರಮಾಣದಲ್ಲಿ ದೊಡ್ಡದಾಗಿರುವ ಪೂರ್ವಶ್ರೇಣಿಯ ನಾರಿಕೇಲ ವಂಶಕ್ಕೆ ಸೇರಿದ ಕೋಳಿಯ ಎದುರಿಗೆ ಬಲ ಮತ್ತು ಪ್ರಮಾಣದಲ್ಲಿ ಚಿಕ್ಕದಾಗಿರುವ ಪಶ್ಚಿಮ ಶ್ರೇಣಿಯ ಬಲಾಕಾ ವಂಶಕ್ಕೆ ಸೇರಿದ ಕೋಳಿಯನ್ನು ಬಿಡಲಾಗಿದೆ?' ಆ ವಿಷಯದಲ್ಲಿ ತಜ್ಞನಾದ ಆ ಮುದಿ ಬ್ರಾಹ್ಮಣನು 'ಈ ಮೂರ್ಖರೊಂದಿಗೆ ಅಂತಹ ನಿಯಮಗಳನ್ನು ಕುರಿತು ಕೇಳುವುದರಿಂದ ಏನು ಪ್ರಯೋಜನ? ನೀನು ಸುಮ್ಮನಿರು.' .... ಕೋಪಾವೇಶದಿಂದ ಕೋಳಿಗಳ ಜೋಡಿಯು ಹೋರಾಡ ತೊಡಗಿತು. ಎದಿರೇಟನ್ನು ನೀಡಲು ತೊಡಗಿದ ಆಯಾ ಕೋಳಿಯ ಬೆಂಬಲಿಗರು ಆಗಾಗ ಸಿಂಹನಾದವನ್ನು ಮಾಡಿ ತಮ್ಮ ಪಕ್ಷದ ಕೋಳಿಗೆ ಪ್ರೋತ್ಸಾಹವನ್ನು ನೀಡುತ್ತಿದ್ದರು. ಅಷ್ಟರಲ್ಲಿ ಆ ಪಶ್ಚಿಮ ಶ್ರೇಣಿಯ ಕೋಳಿಯು ಸೋತಿತು. ಆ ಜಾಣ ಬ್ರಾಹ್ಮಣನು ತನ್ನ ಶ್ರೇಣಿಯ ಕೋಳಿಯ ಗೆಲುವಿನಿಂದ ಸಂತುಷ್ಟನಾದನು.''
( 1925 : 197)

ಬ್ರಾಹ್ಮಣರು ಕೂಡಾ ಕೋಳಿ-ಅಂಕ ನಡೆಯುವಲ್ಲಿಗೆ ಹೋಗಿ ಆ ಕ್ರೀಡೆಯಲ್ಲಿ ಭಾಗವಹಿಸುತ್ತಿದ್ದರು, ಎಂಬ ಉಲ್ಲೇಖವನ್ನು ಮಹಾಕವಿದಂಡಿ ಮಾಡಿರುವುದು ಗಮನೀಯ ಅಂಶವಾಗಿದೆ.

ಆರನೆಯ ಶತಮಾನದಲ್ಲಿ ರಚಿತವಾದ 'ಬೃಹತ್ಸಂಹಿತಾ' ಕೃತಿಯ 53ನೆಯ ಅಧ್ಯಾಯದಲ್ಲಿ ಕೋಳಿಗಳ ಲಕ್ಷಣಗಳನ್ನು ವಿವರಿಸಲಾಗಿದೆ. ಈ ಕೃತಿಯ ಕರ್ತೃವಾದ ವರಾಹಮಿಹಿರನು ಕೂಡ ಹುಂಜಗಳ ಕಾಳಗವನ್ನು ಮನರಂಜನೆ ಎಂದೇ ವಿವರಿಸುತ್ತಾನೆ. (ನೋಡಿ: ವಿವೇಕ ರೈ. ಬಿ.ಎ. 1977:2)

ಕನ್ನಡ ಕಾವ್ಯಗಳಲ್ಲಿ ಕೋಳಿ ಅಂಕದ ಬಗೆಗೆ ಮೊದಲು ವಿವರ ನೀಡಿದವನೆಂದರೆ ಹತ್ತನೆಯ ಶತಮಾನದ ಕವಿ ಪೊನ್ನ. ಈತನು ತನ್ನ ಶಾಂತಿ ಪುರಾಣದ ಒಂಭತ್ತನೆ ಅಧ್ಯಾಯದಲ್ಲಿ ಕೋಳಿ ಅಂಕದ ವಿವರಣೆಯನ್ನು ನೀಡುತ್ತಾನೆ. ಘನರಥ ಮಹಾರಾಜನು ಮೇಘರಥಕುಮಾರನೊಂದಿಗೆ ಬೀದಿಯಲ್ಲಿ ಸಂಚರಿಸುತ್ತಿದ್ದಾಗ ಕೋಳಿಗಳು ಕಾದುವುದನ್ನು ನೋಡುತ್ತಾನೆ. ಪೊನ್ನನು ಕೋಳಿ ಕಾಳಗವನ್ನು ಹೀಗೆ ವರ್ಣಿಸುತ್ತಾನೆ.

ಕಿಡಿಗುಟ್ಟದ ತೆರದಿಂ ಕಡಿ
ಗಡಿಯಾಗಿರೆ ಪೋರ್ವವೆರಡು ಕೋಳಿಗಳು ಕಂ
ಡೆಡೆಯುಂ ಭವವುಂ ಭೂಪತಿ
ನಡೆ ನೋಡಿ ತದೀಯ ಕೋಪಹೇತುವನರಿದುಂ
( ಶಾಂತಿಪುರಾಣ 9 — 45 )

ಪೊನ್ನನ ಈ ವರ್ಣನೆಯಲ್ಲಿ ಕೋಳಿ ಕಾಳಗದ ರಭಸ ಮತ್ತು ತೀಕ್ಷ್ಣತೆ ಚೆನ್ನಾಗಿ ಪ್ರಕಟವಾಗಿದೆ.

ರಾಘವಾಂಕ (14ನೆಯ ಶತಮಾನ) ನ ಹರಿಶ್ಚಂದ್ರ ಕಾವ್ಯದಲ್ಲಿ 'ಕೋಳಿ ಕೋಳಿಯನು ಬಯಸುವವಲ್ಲದೆ ನೋಳಿದು ರಾಜಹಂಸಯಂನೊಲಲ್ಪುದೆ?' (4 — 44) ಎಂಬ ಗಾದೆಯಂತಹ ಮಾತು ಬಂದಿದೆ. ಕೋಳಿ ಕೋಳಿಯನ್ನು ಬಯಸುತ್ತದೆ ಎಂಬ ಪ್ರಯೋಗದ ಹಿಂದೆ ಕೋಳಿಗಳು ಕಾದುವ ನೆನಪುಗಳು ಇದ್ದಂತಿದೆ.

ಲಕ್ಷ್ಮೀಶ (16ನೆಯ ಶತಮಾನ) ನ ಜೈಮಿನಿ ಭಾರತದ ಆರನೆಯ ಸಂಧಿಯಲ್ಲಿ ಅರಮನೆಯ ವರ್ಣನೆ ಬರುತ್ತದೆ. ಆ ಸಂಧಿಯ 39ನೆಯ ಪದ್ಯ ಈ ಕೆಳಗಿನಂತಿದೆ.

ತಗರ್ವೆಣಗಿಸುವ ಸಿಪಿಲೆಗಬ್ಬಿಸುವ ಕೋಳಿಗಾ
ಳಿಗವ ಕಾದಿಸುವ ಕರಿತುರಗ ದೇರಾಟವುಂ
ಮಿಗೆ ತೋರಿಸುವ ನೆತ್ತ ಪಗಡೆಯೊಳ್ ಬಿನದಿಸುವ ಜೂಜುಗಳ ನೊಡ್ಡಿನಲವ

ಬಗೆ ಬಗೆಯ ರಾಜಪುತ್ರರ ತನುವಿಲೇಪನಾ
ದಿ ಗಳೊರಸೊರಸಿ ನಿಂದುದಿರ್ದ ಪರಿಮಳದ ಧೂ
ಳಿಗಳನಲ್ಲರ್ದ ಸೊಕ್ಕಾನೆಗಳ್ ಮೊಗೆಮೊಗೆದು ಮಿಗೆ ಚೆಲ್ಲಿಕೊಳುತಿರ್ದುವಾ

( ಜೈಮಿನಿ ಭಾರತ 6 – 39 )

ವಿರೂಪಾಕ್ಷ ಪಂಡಿತ (17ನೆಯ ಶತಮಾನ) ನ ಚೆನ್ನಬಸವ ಪುರಾಣದ 63ನೆಯ ಸಂಧಿಯಲ್ಲಿ ಈ ಕೆಳಗಿನ ಪದ್ಯ ಬರುತ್ತದೆ.

ಪೇಳರಿನ್ನೇಂ ಸಿದ್ಧರಾಮ ಹೇಟೆಯ ಮರಳ
ಕೋಳಿಗಳ ಮೇಲೆ ತನ್ನಯ ಹೇಟೆಯಂ ಬಿಟ್ಟು
ಕಾಳಗದಿನೆಲ್ಲವಂ ಗೆದುಕೊಂಡಿರದೆ ತಾನೊಯ್ಯುತಿರಲೊಂದು ದಿವಸ
ಆಲೋಚನಂಗೆಯ್ಯುಂ ತನ್ನೊಳಗೆ ಚಿಂತೆಯಂ
ತಾಳಿ ವೀರಣ್ಣೊಡೆಯರೈ ತಂದು ನೋಡಲಾ
ಕೋಳಿಗಳನೆಲ್ಲವಂ ನಿರವಯವ ನೈದಿಸಲ್ ಕಂಡೆನೆನೆ ಬಯಲಪ್ಪನು

(ಚೆನ್ನಬಸವ ಪುರಾಣ 63 – 27)

ಈ ಪದ್ಯದಲ್ಲಿ ಕೋಳಿ ಕಾಳಗದ ಸ್ಪಷ್ಟ ಉಲ್ಲೇಖವಿದೆ.

ಗೋವಿಂದ ವೈದ್ಯ (18ನೆಯ ಶತಮಾನ) ನ 'ಕಂಠೀರವ ನರಸರಾಜ ವಿಜಯ' ದ ರನೆಯ ಸಂಧಿಯಲ್ಲಿ ಕೋಳಿಕಾಳಗದ ಉಲ್ಲೇಖ ಬರುತ್ತರೆ.

'' ತಗರುಸಿಪಲೆ ಕೋಳಿಕಾಳಗಗಳು ನೆರೆ
ಪಗಡೆ ಜೂಜುಗಳ ನೆವದಲಿ
ಬಗೆ ಬಗೆಯಲಿ ಸಿಂಗರಿಸಿಯೂ ಬೀದಿಯೊಳ್
ಸೊಗಸುಗಾರರು ಚರಿಸುವರು ''

(ಕಂಠೀರವ ನರಸರಾಜವಿಜಯಂ 6–197)

ಈ ಪದ್ಯದಲ್ಲಿ ಕೋಳಿಕಾಳಗ ನಡೆಸುವವರನ್ನು 'ಸೊಗಸುಗಾರರು' ಎಂದು ಕೊಂಡಾಡಿರುವುದು ಕುತೂಹಲಕರವಾಗಿದೆ.

ನಿರಂಜನರು ಸಂಪಾದಿಸಿದ 'ಜ್ಞಾನಗಂಗೋತ್ರಿ' (1973) ಸಂಪುಟ ಆರರಲ್ಲಿ ಕೋಳಿ ಕಾಳಗದ ಬಗ್ಗೆ ಉಲ್ಲೇಖ ಇದೆ. ಅದರಲ್ಲಿ ಗ್ರೀಕ್ ದೇಶದಲ್ಲಿ ಕೋಳಿ ಕಾಳಗ ಆರಂಭವಾದ ರೀತಿಯನ್ನು ಹೇಳಲಾಗಿದೆ. ಅದು ಹೀಗಿದೆ. 'ಗ್ರೀಕ್ ದೊರೆ ಥೆಮಿಸ್ಟೋಕ್ಲೀಸ್ (ಕ್ರಿ.ಪೂ.514 – 449 ) ಒಮ್ಮೆ ಪರ್ಷಿಯನರ ಮೇಲೆ ದಂಡೆತ್ತಿ ಹೊರಟ. ಅವನು ತನ್ನ ಸೈನ್ಯದೊಂದಿಗೆ ಸಾಗುತ್ತಿದ್ದಾಗ ಮಧ್ಯ ರಸ್ತೆಯಲ್ಲಿ ಎರಡು ಕೋಳಿಗಳು ವೀರಾವೇಶದಿಂದ ಹೋರಾಡುತ್ತಿದ್ದುವು. ಅವುಗಳ ಸುತ್ತಲೂ ಜನರು ನೆರೆದು ಉತ್ಸುಕತೆಯಿಂದ ಹೋರಾಟವನ್ನು ನೋಡುತ್ತಿದ್ದರು. ದೊರೆಯೂ ಸೈನಿಕರೂ ಆ 'ಗರಿವೀರ'ರ ಸಾಹಸವನ್ನು ನೋಡಿ ಮೆಚ್ಚಿದರು. ಪರ್ಷಿಯನರ ಮೇಲೆ ಸಾಧಿಸಿದ ವಿಜಯದ ಸ್ಮರಣಾರ್ಥವಾಗಿ ಮುಂದೆ ಪ್ರತಿವರ್ಷವೂ ಅಥೆನ್ಸ್ ನಗರದಲ್ಲಿ ಆ ದೊರೆ ಕೋಳಿ ಕಾಳಗವನ್ನು ಏರ್ಪಡಿಸಿದ್ದ.

ಭಾರತ, ಚೀನ, ಪರ್ಷಿಯ ದೇಶಗಳಲ್ಲಿ ಪ್ರಾಚೀನ ಕಾಲದಿಂದಲೂ ಕೋಳಿ ಕಾಳಗ ಅಥವಾ ಕೋಳಿಅಂಕ ರೂಢಿಯಲ್ಲಿತ್ತು ಎನ್ನುತ್ತಾರೆ. ಕ್ರಿ.ಪೂ.5ನೆಯ ಶತಮಾನದಲ್ಲಿ ಏಷ್ಯ ಮೈನರ್, ಸಿಸಿಲಿ ದೇಶಗಳಲ್ಲಿ ಇದು ಪ್ರಸಿದ್ಧವಾಗಿತ್ತು. ಪ್ರಾಚೀನ ಗ್ರೀಸ್, ರೋಮ್ ದೇಶಗಳಲ್ಲೂ ಇದು ಜನರ ಮೆಚ್ಚಿನ ಕ್ರೀಡೆಯಾಗಿತ್ತು.

'ಇಂಗ್ಲೆಂಡಿನ ಅನೇಕ ದೊರೆಗಳು ಕೋಳಿ ಕಾಳಗವನ್ನು ಮೆಚ್ಚಿಕೊಂಡಿದ್ದರು. 8 ನೆಯ ಹೆನ್ರಿ (1481 – 1547) ಇಂಗ್ಲೆಂಡಿನ ವೈಟ್ ಹಾಲ್ ಎಂಬಲ್ಲಿ ಒಂದು ಕೋಳಿ ಕಾಳಗ ಕಣವನ್ನು ಕಟ್ಟಿಸಿದನಂತೆ. ಮೊದಲನೆಯ ಜೇಮ್ಸ್ (1566 – 1625) ಮತ್ತು ಎರಡನೆಯ ಚಾರ್ಲ್ಸ್ (1630 – 1685) ವಾರದಲ್ಲಿ ಎರಡು ಬಾರಿ ಕೋಳಿ ಕಾಳಗ ನೋಡುತ್ತಿದ್ದರಂತೆ.'

ಇಂಗ್ಲೆಂಡ್, ಸ್ಕಾಟ್ಲೆಂಡ್‌ಗಳಲ್ಲಿ ಇಗರ್ಜಿಯ ಹೊರ ಆವರಣದಲ್ಲಿ ಕೆಲವೊಮ್ಮೆ ಇಗರ್ಜಿಯ ಒಳಗೂ ಕೋಳಿ ಕಾಳಗಗಳು ನಡೆಯುತ್ತಿದ್ದವು. ಭಾನುವಾರ ಮತ್ತು ಕ್ರೈಸ್ತ ಹಬ್ಬದ ದಿವಸಗಳು ಕೋಳಿ ಕಾಳಗಕ್ಕೆ ಪ್ರಶಸ್ತ ಎಂಬ ಭಾವನೆ ಇತ್ತು. (1977:235). ಕೋಳಿ ಅಂಕಕ್ಕೆ ಸಂಬಂಧಿಸಿದಂತೆ ಹೊರದೇಶಗಳ ಪ್ರಾಚೀನ ಉಲ್ಲೇಖ ಇಲ್ಲಿ ಉಲ್ಲೇಖನೀಯವಾಗಿದೆ.

ಚಂದ್ರಶೇಖರ ಕಂಬಾರ ಅವರು ಸಂಪಾದಿಸಿದ "ಕನ್ನಡ ಜಾನಪದ ವಿಶ್ವಕೋಶ" (1985) ದಲ್ಲಿ ಕೋಳಿ ಜೂಜು ಎಂಬಲ್ಲಿ ಈ ರೀತಿಯ ಉಲ್ಲೇಖ ಇದೆ. 'ಹಬ್ಬ, ಜಾತ್ರೆ, ನೇಮ, ಕಂಬಳ ಇತ್ಯಾದಿಗಳು ಕಳೆದ ಮೇಲೆ ತುಳುನಾಡಿನಲ್ಲಿ ಕೋಳಿ ಪಂದ್ಯ ಪ್ರಾರಂಭವಾಗುತ್ತದೆ. ತುಮಕೂರು ಜಿಲ್ಲೆಯ ಕೆಲವು ಭಾಗಗಳಲ್ಲಿ (ಬೇಸಿಗೆಯಲ್ಲಿ) ವಾರಕ್ಕೊಂದು ದಿನ ನಡೆಯುತ್ತದೆ. ನಿರ್ದಿಷ್ಟ ಪ್ರದೇಶಕ್ಕೆ ಪಂದ್ಯಕ್ಕಾಗಿ ಸಾಕಿರುವ ಹುಂಜಗಳ ಕಾಲಿಗೆ ಕತ್ತಿಗಳನ್ನು ಕಟ್ಟಿ ರಣರಂಗಕ್ಕೆ ಬಿಡುತ್ತಾರೆ. ಕಾಳಗ ನಡೆಯುತ್ತಿರುವಾಗ ಕತ್ತಿ ಏಟಿನಿಂದ ಹುಂಜಕ್ಕೆ ಗಾಯಗಳಾಗಿದ್ದರೆ ಆಗಲೆ ದಾರದಿಂದ ಹೊಲಿಗೆ ಹಾಕಿ ಹುಡುಗರ ಮೂತ್ರವನ್ನು ಇಲ್ಲವೆ ಹೆಂಡವನ್ನು ಕುಡಿಸಿ ಮತ್ತೆ ಕಾಳಗಕ್ಕೆ ಬಿಡುತ್ತಾರೆ. ಧೈರ್ಯವಿಲ್ಲದ ಕೋಳಿ ಸೋತು ಓಡಿ ಹೋಗುತ್ತದೆ. ಇಂಥ ಸಂದರ್ಭಗಳಲ್ಲಿ ಓಡಿ ಹೋದ ಅಥವಾ ಸತ್ತ ಕೋಳಿ ಗೆದ್ದ ಹುಂಜದ ಯಜಮಾನನಿಗೆ ಸೇರುತ್ತದೆ. ಆತ ಅದನ್ನು ಮನೆಗಾದರೂ ಕೊಂಡೊಯ್ಯಬಹುದು, ಅಲ್ಲಿಯೇ ತನಿಷ್ಟ ಬಂದವರಿಗೆ ಕೊಡಲೂ ಬಹುದು.'

"ಈ ರೀತಿ ಪಂದ್ಯ ನಡೆಯುತ್ತಿರುವಾಗ ಒಂದೊಂದು ಪಕ್ಷಕ್ಕೆ ಒಬ್ಬೊಬ್ಬ ನಿಂತು ಇಂಥದೇ ಹುಂಜ ಗೆಲ್ಲುತ್ತದೆಂದು ಹಣ ಕಟ್ಟಿ ಗೆಲ್ಲುವವರ ತಂಡವೂ ಅಲ್ಲಿರುತ್ತದೆ.

ಎರಡು ಪಕ್ಷಗಳಿಗೂ ಬೇರೆ ಬೇರೆ ಕತ್ತಿ ಕಟ್ಟುವವರಿರುತ್ತಾರೆ. ಕತ್ತಿಯ ಸುಂಕ ವನ್ನು ಕೊಡುವ ಪದ್ಧತಿ ಇದೆ. ಕೋಳಿ ಪಂದ್ಯಕ್ಕೆ ಹೊರಡುವಾಗ 'ಕೋಳಿ ಪಂಚಾಂಗ' ವನ್ನು ನೋಡಿಕೊಂಡು ಹೋಗುವ ಸಂಪ್ರದಾಯವಿದೆ. ಬಂಟರು (ದಕ್ಷಿಣ ಕನ್ನಡ) ಅಪೇಕ್ಷಿಸುವ ಆಟಗಳಲ್ಲಿ ಜನಪ್ರಿಯ ಆಟ ಎಂದರೆ ಹುಂಜಗಳ ಹೋರಾಟ'' (1985: 578)

ಈ ಮೇಲಿನ ಉಲ್ಲೇಖದಲ್ಲಿ ಕೋಳಿ ಪಂದ್ಯ, ಬಾಳ್ ಕಟ್ಟುವ ವಿಧಾನ ಮತ್ತು ಯಾವ ಜಾತಿಯ ಪ್ರಧಾನ ಆಟ ಎಂಬುದನ್ನೂ ಹೇಳಲಾಗಿದೆ. ತುಮಕೂರು ಜಿಲ್ಲೆಯ ಕೆಲವು ಭಾಗಗಳಲ್ಲಿ ನಾರಕೊಳ್ಳುಂದು ದಿನ ಕೋಳಿ ಅಂಕ ನಡೆಯುವ ಬಗೆಗೂ ಪ್ರಸ್ತಾಪಿಸಲಾಗಿದೆ.

ಸೂರ್ಯನಾಥ ಯು. ಕಾಮತ್ ಅವರು ಸಂಪಾದಿಸಿದ 'ಕರ್ನಾಟಕ ರಾಜ್ಯ ಗ್ಯಾಸೆಟಿಯರ್' (1984) ನಲ್ಲಿ ಕೋಳಿ ಕಾಳಗದ ಉಲ್ಲೇಖವಿದೆ. ಅದರಲ್ಲಿ ಹೀಗಿದೆ: 'ಮಾನಸೋಲ್ಲಾಸದ ಐದನೆಯ ಭಾಗದಲ್ಲಿ ಈ ಪಂದ್ಯಗಳ ವಿವರ ದೊರೆಯುತ್ತದೆ. ಮಲ್ಲಯುದ್ಧ, ಕೋಳಿ, ಗೂಳಿ ಹಾಗೂ ಟಗರುಗಳ ಕಾಳಗ ಜಲ, ಮರಗಳು ಹಾಗೂ ವೃಕ್ಷಗಳನ್ನೂ ಒಳಗೊಂಡ ಪಂದ್ಯಗಳು, ಉಯ್ಯಾಲೆ, ಚದುರಂಗ, ಪಗಡೆ, ಜೂಜು, ಕವಡೆ ಇತ್ಯಾದಿಗಳನ್ನೂ ಅದರಲ್ಲಿ ಪ್ರಸ್ತಾಪಿಸಲಾಗಿದೆ.' (1984:ಸಂ-1: 404)

ಸೃಜನಶೀಲ ಬರಹಗಳಲ್ಲೂ ಕೋಳಿ ಅಂಕದ ಪ್ರಸ್ತಾಪ ಬಂದಿರುವುದನ್ನೂ ಕಾಣಬಹುದು. ಕುವೆಂಪು ಅವರ ಕಾನೂರು ಹೆಗ್ಗಡಿತಿ (1936) ಕಾದಂಬರಿಯಲ್ಲಿ 'ಕೋಳಿಯಂಕದ ಪಟ್ಟೆ ಯಲ್ಲಿ' ಎಂಬ ಅಧ್ಯಾಯವಿದೆ. ಆ ಭಾಗದಲ್ಲಿ ಕೋಳಿ ಅಂಕದ ಬಗ್ಗೆ ದೀರ್ಘವಾಗಿ ಪ್ರಸ್ತಾಪಿಸುತ್ತಾರೆ.

'' ಈ ಬಯಲಿನ ಹೆಸರು 'ಕೋಳಿಅಂಕದ ಪಟ್ಟೆ'. ಆ ಹೆಸರು ಮೊದಲು

ಅನ್ವರ್ಥವಾಗಿ ಹುಟ್ಟಿ ಕಣೆಗೆ ಅಂಕಿತವಾಗಿ ಬಿಟ್ಟಿತ್ತು. ಬಹುಕಾಲದಿಂದಲೂ ಆ ಬಯಲು ಕೋಳಿಗಳ ಕಾಳಗಕ್ಕೂ ಜೂಜಾಟಕ್ಕೂ ರಂಗವಾಗಿತ್ತು. ದೊಡ್ಡ ದೊಡ್ಡ ನಗರಗಳಲ್ಲಿ ರಾಜರುಗಳು, ಶ್ರೀಮಂತರೂ ಸೇರಿ, ಕುದುರೆ ಜೂಜು ನಡೆಸುವಂತೆ ಗಟ್ಟದ ಮೇಲಕ್ಕೆ ಕೆಲಸದಾಳುಗಳನ್ನು ಕರೆತರುವ ಸೇರೆಗಾರರು 'ಕೋಳಿ ಅಂಕ'ಗಳನ್ನು ಮಾಡುವುದು ವಾಡಿಕೆಯಾಗಿತ್ತು. ಆ ಬಯಲು ಕಳ್ಳಂಗಡಿಗೆ ಸಮೀಪವಾಗಿದ್ದುದರಿಂದಲೂ, ಕಾಡಿನ ನಡುವೆ ಗೋಪ್ಯವಾಗಿದ್ದುದರಿಂದಲೂ, ಜೂಜು, ಜುಗಾರಿಯಾಡುವಾಗ ಎಲ್ಲಿಯಾದರೂ ಒಂದು ವೇಳೆ ಕರಿಯ ಪೇಟದವರು (ಪೋಲೀಸಿನವರು) ಬಂದರೂ ಅರಣ್ಯದಲ್ಲಿ ಅವರ ಕಣ್ಣಿಗೆ ಮಣ್ಣೆರಚಿ ತಪ್ಪಿಸಿಕೊಳ್ಳಲು ಬೇಕಾದಷ್ಟು ಅನುಕೂಲಗಳಿದ್ದುದರಿಂದಲೂ, ಅದು 'ಕೋಳಿ ಅಂಕದ ಪಟ್ಟೆ'ಯಾಗಲು ಅತ್ಯಂತಾರ್ಹವಾಗಿತ್ತು." (1936 : 506)

ಬಂಟ ಜಾತಿಯವರು ಕೋಳಿ ಅಂಕದಲ್ಲಿ ಹೆಚ್ಚು ಪಾಲ್ಗೊಳ್ಳುತ್ತಾರೆ, ಎಂಬುದನ್ನೂ ಇವರು ಬರೆಯುತ್ತಾರೆ. ಕೋಳಿ ಅಂಕಕ್ಕೆ ಜನ ಸೇರುವ ರೀತಿ, ಕೋಳಿಗಳಿಗೆ ಕತ್ತಿ ಕಟ್ಟುವುದನ್ನು ಕೋಳಿಗಳು ಕಾಳಗ ಮಾಡುವುದನ್ನು ಜೂಜುಗಾರರ ಬಗ್ಗೆ ವಿವರವಾಗಿ ಕುವೆಂಪು ಅವರು ಪ್ರಸ್ತಾಪಿಸಿರುವುದು ಕುತೂಹಲಕರವಾಗಿದೆ.

ಬಿ.ಎ. ವಿವೇಕ ರೈ ಅವರ 'ತುಳುವ ಸಂಸ್ಕೃತಿ' (1977) ಎಂಬ ಪುಸ್ತಕದಲ್ಲಿ ಕೋಳಿ ಅಂಕದ ಬಗೆಗೆ ಸುದೀರ್ಘ ವಿವರಣೆಯಿದೆ. ಅವರು ಹೀಗೆ ಬರೆಯುತ್ತಾರೆ. 'ಕೋಳಿ ಅಂಕಗಳನ್ನು ಯಾವ ಉದ್ದೇಶದಿಂದ ಪ್ರಾರಂಭಿಸಿದರು ಎಂದು ನಿಶ್ಚಯವಾಗಿ ಹೇಳಲು ಸಾಧ್ಯವಿಲ್ಲ. ತಾವು ಸಾಕುವ ಪಕ್ಷಿಗಳ ಕಡೆಗೆ ಹೆಚ್ಚಿನ ಗಮನ ಕೊಟ್ಟು ಅವುಗಳನ್ನು ಪ್ರೀತಿಯಿಂದ ಸಾಕಬೇಕೆಂಬ ವಿಚಾರದಿಂದ ನಮ್ಮ ಪೂರ್ವಿಕರು ಕೋಳಿ ಅಂಕಗಳನ್ನು ಪ್ರಾರಂಭಿಸಿದ್ದಿರಬಹುದು. ಬೇಸಾಯಗಾರರು ಕೋಳಿ ಸಾಕಾಣಿಯನ್ನು ಒಂದು ಉಪವೃತ್ತಿಯನ್ನಾಗಿ ಇಟ್ಟುಕೊಂಡಿದ್ದರು." (1977 : 2) ಎಂದು ಹೇಳುವ ಮೂಲಕ ಕೋಳಿಗಳ ಜಾತಿ, ಹುಂಜಗಳ ಜುಟ್ಟು, ಕುಕ್ಕುಟದ ಪಂಚಾಂಗ, ಕೋಳಿ ಪಂದ್ಯ ಮುಂತಾದ ವಿಷಯಗಳ ಮೇಲೂ ಬೆಳಕು ಚೆಲ್ಲುತ್ತಾರೆ. ಮೊದಲ ಬಾರಿಗೆ ಡಾ. ರೈ ಅವರು ಕೋಳಿ ಅಂಕದ ಬಗೆಗೆ ಸಾಕಷ್ಟು ವಿವರಗಳನ್ನು ಕಲೆಹಾಕಿದ್ದಾರೆ.

ಬಿ.ಎ. ವಿವೇಕ ರೈ ಇವರ ಮಹಾಪ್ರಬಂಧ (1985) ದಲ್ಲಿ ಕೋಳಿಕಟ್ಟಕ್ಕೆ ಹೋಗುವ ಮತ್ತು ಕೋಳಿ ಕಟ್ಟುವ ವಿಧಾನದ ಬಗ್ಗೆ ಉಲ್ಲೇಖವಿದೆ. ''ತುಳು ನಾಡಿನ ಜನಪ್ರಿಯ ಕ್ರೀಡೆಗಳಲ್ಲಿ ಕೋಳಿ ಅಂಕ ಅಥವಾ ಕೋಳಿಕಟ್ಟ ಒಂದು.'' ಅಂತಹ ಕೋಳಿಕಟ್ಟಕ್ಕೆ ಹೋಗುವ ಮತ್ತು ಕೋಳಿಕಟ್ಟುವ ವಿಧಾನವನ್ನು 'ಜುಮಾದಿ ಪಾಡ್ದನ' ದಲ್ಲಿ ಹಂತ ಹಂತವಾಗಿ ತಿಳಿಸಲಾಗಿದೆ. 'ಕೋರಿದ ಕಟ್ಟಗ್ ಪೋವೊ ಡುಂದು ಕೋರಿಗ್ ನೀರ್ ಬಾರ್ ದೀಪಂಡೆ. ತಾನ್ ಜೋತ್ರ ತುತ್ತೊಂಡೆ. ಪುಳ್ಳೆ ಬಣ್ಣದ ತರೆತ್ರ ಕಟ್ಟೊಂಡೆ. ಕಾರ್‌ಗ್ ನೂರ್ಲರಿತ್ತ ಮೋಂಡಾಣ ಮುಟ್ಟು ಪಾಡೊಂಡೆ. ದೊಂಬುಗು ಕಲ್ಕುಡೆ ಪತ್ತೊಂಡೆ. ತನ್ನ ಜೀವು ಅರುವತ್ತೆರೆ ಕೈಟ್ಟ್ ಕಟ್ಟ್ ಕೋರಿನ್ ಬುಡ್ದ್ ಕೊರಿಯೆ. ಕೋರಿಕಟ್ಟ ಬಾಳದ ಸೂಡಿನ್ ಕೈಟ್ಟ್ ಪತ್ತೊಂಡೆ, ಅಡೂರ ದೇರ ಬೈದ್ಯೆ.' (ಕೋಳಿ ಅಂಕಕ್ಕೆ ಹೋಗಬೇಕು ಎಂದು ಕೋಳಿಗೆ ನೀರು ಮತ್ತು ಭತ್ತವನ್ನು ಇಡಿಸಿದನು.ತಾನು ಧೋತ್ರ ಉಟ್ಟನು. ಕೆಂಪು ಬಣ್ಣದ ಮುಂಡಾಸನ್ನು ಕಟ್ಟಿಕೊಂಡನು. ಕಾಲಿಗೆ ಸುಂದರವಾದ ಮೆಟ್ಟನ್ನು ಹಾಕಿಕೊಂಡನು. ಬಸಿಲಿಗೆ ತಾಳೆಗರಿಯ ಕೊಡೆಯನ್ನು ಹಿಡಿದುಕೊಂಡನು. ತನ್ನ [illegible] ಅಳಿಯಂದಿರ ಕೈಯಲ್ಲಿ ಕಟ್ಟದ ಕೋಳಿಗಳನ್ನು ಕೊಟ್ಟನು. ಈ ಅಡೂರ ದೇರಬೈದ್ಯನು ಕೋಳಿ ಕಟ್ಟದ ಬಾಳಿನ ಸೂಡಿಯನ್ನು (ಕತ್ತಿಯ ಚೀಲ) ಕೈಯಲ್ಲಿ ಹಿಡಿದುಕೊಂಡನು). (1985 : 211)

ರಸಿಕ ಪುತ್ತಿಗೆ ಅವರು ಮಕ್ಕಳಿಗಾಗಿ ಬರೆದ 'ಕಂಬಳ – ಕೋಳಿಅಂಕ' (1982) ಪುಸ್ತಕದಲ್ಲಿ ಕಂಬಳ ಮತ್ತು ಕೋಳಿಅಂಕವನ್ನು ಪರಿಚಯಿಸುತ್ತಾರೆ. ಕೋಳಿ ಅಂಕದ ಬಗ್ಗೆ ಹೀಗೆ ಬರೆಯುತ್ತಾರೆ. ''ಕೋಳಿ ಅಂಕ, ಕೋಳಿ ಕಾಳಗ ನಡೆಸುವವರು ಕೋಳಿ ಸಾಕುವ ಮತ್ತು ಕೋಳಿ ತಿನ್ನುವ ಜನ ಮಾತ್ರ. ಇತರರು ಕದ್ದು ಮುಚ್ಚಿ ನೋಡಲು ಬಂದಾರು, ಜೂಜು ಕಟ್ಟಿಯಾರು. ಆದರೆ ಕಾಳಗದ ಕೋಳಿಗಳನ್ನು ಸಾಕುವುದಾಗಲೀ ಅವುಗಳನ್ನು ಕಾದಾಡಿಸುವುದಾಗಲೀ ಇತರರ ಕಾರ್ಯವಲ್ಲ. ಶ್ರೀ ಕೃಷ್ಣನು ಒಮ್ಮೆ ಅರ್ಜುನನಿಗೆ 'ಕೋಳಿಯ ಸಾಹಸ ನಿನಗೆ ಬರಲಿ' ಎಂದು ಹರಸಿದನಂತೆ. ಅದರಿಂದ ಕುಪಿತನಾದ ಅರ್ಜುನ ಕೃಷ್ಣನೊಡನೆ ಮುನಿಸು ಮಾಡಿದನಂತೆ. ನಂತರ

ಬಿ.ಎ. ವಿವೇಕ ರೈ ಇವರ ಮಹಾಪ್ರಬಂಧ (1985) ದಲ್ಲಿ ಕೋಳಿಕಟ್ಟಕ್ಕೆ ಹೋಗುವ ಮತ್ತು ಕೋಳಿ ಕಟ್ಟುವ ವಿಧಾನದ ಬಗ್ಗೆ ಉಲ್ಲೇಖವಿದೆ. ''ತುಳು ನಾಡಿನ ಜನಪ್ರಿಯ ಕ್ರೀಡೆಗಳಲ್ಲಿ ಕೋಳಿ ಅಂಕ ಅಥವಾ ಕೋಳಿಕಟ್ಟ ಒಂದು.'' ಅಂತಹ ಕೋಳಿಕಟ್ಟಕ್ಕೆ ಹೋಗುವ ಮತ್ತು ಕೋಳಿಕಟ್ಟುವ ವಿಧಾನವನ್ನು 'ಜುಮಾದಿ ಪಾಡ್ದನ' ದಲ್ಲಿ ಹಂತ ಹಂತವಾಗಿ ತಿಳಿಸಲಾಗಿದೆ. 'ಕೋರಿದ ಕಟ್ಟಗ್ ಪೋಪೊಂದುಂದು ಕೋರಿಗ್ ನೀರ್ ಬಾರ್ ದೀಪಂಡೆ. ತಾನ್ ಜೋತ್ರ ತುತ್ತೊಂಡೆ. ಪುಳ್ಕೆ ಬಣ್ಣದ ತರೆತ್ರ ಕಟ್ಟೊಂಡೆ. ಕಾರಗ್ ನರ್ಲರಿತ್ತ ಮೋಂಟೆ ಮುಟ್ಟು ಪಾಡೊಂಡೆ. ದೊಂಬುಗು ಕಲ್ಕುಡೆ ಪತ್ತೊಂಡೆ. ತನ್ನ ಜೀವ ಅರುವತ್ತರೆ ಕೈಟ್ ಕಟ್ಟ ಕೋರಿನ್ ಬುಡ್ದ್ ಕೊರಿಯೆ. ಕೋರಿಕಟ್ಟ ಬಾಳದ ಸಾಡಿನ್ ಕೈಟ್ ಪತ್ತೊಂಡೆ, ಅಡೂರ ದೇರ ಬೈದ್ಯೆ.' (ಕೋಳಿ ಅಂಕಕ್ಕೆ ಹೋಗಬೇಕು ಎಂದು ಕೋಳಿಗೆ ನೀರು ಮತ್ತು ಭತ್ತವನ್ನು ಇಡಿಸಿದನು ತಾನು ಧೋತ್ರ ಉಟ್ಟನು. ಕೆಂಪು ಬಣ್ಣದ ಮುಂಡಾಸನ್ನು ಕಟ್ಟಿಕೊಂಡನು. ಕಾಲಿಗೆ ಸುಂದರವಾದ ಮೆಟ್ಟನ್ನು ಹಾಕಿಕೊಂಡನು. ಬಸಿಲಿಗೆ ತಾಳೆಗರಿಯ ಕೊಡೆಯನ್ನು ಹಿಡಿದುಕೊಂಡನು. ತನ್ನ ತನ್ನ ಅಳಿಯಂದಿರ ಕೈಯಲ್ಲಿ ಕಟ್ಟದ ಕೋಳಿಗಳನ್ನು ಕೊಟ್ಟನು. ಈ ಅಡೂರ ದೇರಬೈದ್ಯನು ಕೋಳಿ ಕಟ್ಟದ ಬಾಳಿನ ಸಾಡಿಯನ್ನು (ಕತ್ತಿಯ ಚೀಲ) ಕೈಯಲ್ಲಿ ಹಿಡಿದುಕೊಂಡನು). (1985 : 211)

ರಸಿಕ ಪುತ್ತಿಗೆ ಅವರು ಮಕ್ಕಳಿಗಾಗಿ ಬರೆದ 'ಕಂಬಳ – ಕೋಳಿಅಂಕ' (1982) ಪುಸ್ತಕದಲ್ಲಿ ಕಂಬಳ ಮತ್ತು ಕೋಳಿಅಂಕವನ್ನು ಪರಿಚಯಿಸುತ್ತಾರೆ. ಕೋಳಿ ಅಂಕದ ಬಗ್ಗೆ ಹೀಗೆ ಬರೆಯುತ್ತಾರೆ. ''ಕೋಳಿ ಅಂಕ, ಕೋಳಿ ಕಾಳಗ ನಡೆಸುವವರು ಕೋಳಿ ಸಾಕುವ ಮತ್ತು ಕೋಳಿ ತಿನ್ನುವ ಜನ ಮಾತ್ರ. ಇತರರು ಕದ್ದು ಮುಚ್ಚಿ ನೋಡಲು ಬಂದಾರು, ಜೂಜು ಕಟ್ಟಿಯಾರು. ಆದರೆ ಕಾಳಗದ ಕೋಳಿಗಳನ್ನು ಸಾಕುವುದಾಗಲೀ ಅವುಗಳನ್ನು ಕಾದಾಡಿಸುವುದಾಗಲೀ ಇತರರ ಕಾರ್ಯವಲ್ಲ. ಶ್ರೀ ಕೃಷ್ಣನು ಒಮ್ಮೆ ಅರ್ಜುನನಿಗೆ 'ಕೋಳಿಯ ಸಾಹಸ ನಿನಗೆ ಬರಲಿ' ಎಂದು ಹರಸಿದನಂತೆ. ಅದರಿಂದ ಕುಪಿತನಾದ ಅರ್ಜುನ ಕೃಷ್ಣನೊಡನೆ ಮುನಿಸು ಮಾಡಿದನಂತೆ. ನಂತರ

ಶ್ರೀ ಕೃಷ್ಣ ಅರ್ಜುನನಿಗೆ ಕೋಳಿಗಳ ಕಾದಾಟದ ದೃಶ್ಯ ತೋರಿಸಿ ಹಲವು ಸಲ ಗಾಯಗೊಂಡರೂ ಇದಿರಾಳಿಯ ಮೇಲೆ ಹೋರಾಡುವ ಕೋಳಿಯನ್ನು ತೋರಿಸಿ ಸಮಾಧಾನ ಮಾಡಿದನಂತೆ. ಈ ರೀತಿಯ ಒಂದು ಕಥೆ ಪ್ರಚಲಿತವಿದೆ. ಇದಕ್ಕೆ ಆಧಾರವಿಲ್ಲ (1982 : 29) ಎಂಬ ಕತೆಯನ್ನು ಉಲ್ಲೇಖಿಸುವ ಮೂಲಕ ಅಂಕದ ಕೋಳಿಯ ಸಾಕಣೆ, ಅಂಕದ ಕ್ರಮ, ಪಂಚಾಂಗ, ಪತಿ ಮಾಡುವುದು, ಅಂಕದ ಕಳ, ಒಡ್ಡವನು, ವೈದ್ಯ, ಮತ್ತೆ ಹೋರಾಟ ಮತ್ತು ಅಂಕದ ವ್ಯವಹಾರಗಳ ಬಗೆಗೂ ವಿವರವಾಗಿ ಬರೆದಿದ್ದಾರೆ. ಕೋಳಿ ಅಂಕದ ಪ್ರತಿಯೊಂದು ಅಂಶವನ್ನು ಸ್ಥೂಲವಾಗಿ ಪರಿಚಯಿಸುವ ಪ್ರಯತ್ನ ಇಲ್ಲಿದೆ. ಈ ಕೃತಿಯನ್ನು ಮಕ್ಕಳಿಗಾಗಿ ಬರೆದಿರುವುದರಿಂದ ವಿಷಯ ಮಂಡನೆಯಲ್ಲಿ ಸರಳತೆಯನ್ನು ಅನುಸರಿಸಲಾಗಿದೆ.

'ಜಾನಪದ ಕಾಸಾರ' (1985) ಈ ಕೃತಿಯಲ್ಲಿ ಎ.ವಿ.ಶ್ಯಾನುಭೋಗ ಅವರು ಬರೆದ ಲೇಖನದಲ್ಲಿ ಜಾನಪದ ಕ್ರೀಡೆಗಳಲ್ಲಿ 'ಕೋಳಿಕಟ್ಟ'ವು ಒಂದು ಎಂದು ಬರೆದಿರುತ್ತಾರೆ. 'ಜನ ಸಾಮಾನ್ಯರಿಗೆ ಅತ್ಯಂತ ಪ್ರಿಯವಾದ ಹಾಗೂ ಲಾಭದಾಯಕವಾದ ಮನೋರಂಜನೆಯ ಸಾಧನವೇ ಕೋಳಿಕಟ್ಟ ಅಥವಾ ಕೋಳಿ ಅಂಕ. ಮಾಂಸಕ್ಕಾಗಿ ಕೋಳಿ ಸಾಕಣೆಯು ಸಾಮಾನ್ಯವಾಗಿದ್ದರೂ, ಕಾಳಗಕ್ಕಾಗಿಯೇ ಬಲಿಷ್ಠ ಹುಂಜಗಳನ್ನು ಈ ಭಾಗದ ಜನರು ಬಹಳ ಆಸ್ಥೆಯಿಂದ ಸಾಕುತ್ತಾರೆ. (1985 : 169) ಕೋಳಿ ಅಂಕ ಜನ ಸಾಮಾನ್ಯರ ಪ್ರಿಯವಾದ ಮನೋರಂಜನಾ ಆಟ ಮತ್ತು ಕೋಳಿಯನ್ನು ಆಹಾರಕ್ಕಾಗಿ ಸಾಕುತ್ತಾರೆ ಎಂಬ ಮಾತುಗಳು ಗಮನಾರ್ಹವಾದದ್ದು.

ವಾಮನ ನಂದಾವರ ಅವರು 'ಸಿಂಗದನ' (1987) ಕೃತಿಯಲ್ಲಿ ಸಂಕ್ಷಿಪ್ತವಾಗಿ ಕೋಳಿ ಅಂಕದ ವಿವರ ನೀಡಿರುತ್ತಾರೆ. 'ಕೋಳಿಕಟ್ಟ ಇನ್ನೊಂದು ಮನೋರಂಜನಾ ಸಾಧನ. ಇದಕ್ಕೂ ಪ್ರಾಚೀನ ಇತಿಹಾಸವಿದೆ. ಕೋಳಿಗಳೆರಡು ಪರಸ್ಪರ ಮುಟ್ಟಿಕೊಳ್ಳುವುದು, ಕಾದಾಡಿ ಕೊಳ್ಳುವುದು, ಮನುಷ್ಯನಿಗೆ ಒಂದು ಸುಂದರ ಸನ್ನಿವೇಶವಾಗಿ ತೋರಿ ಅವುಗಳ ಕಾಲುಗಳಿಗೆ ಬಾಳು ಕಟ್ಟುವುದರ ಮೂಲಕ ಆತ ತನ್ನ ಸ್ವಾರ್ಥ ಸಾಧಿಸಿಕೊಂಡಿರಬೇಕೆನಿಸುತ್ತದೆ. ಮನೆಗೆ ನೆಂಟರು ಬಂದಾಗಲೋ ನಾಲ್ಕು ಜನ

ಹಳ್ಳಿಗರು ಸೇರಿಕೊಂಡಾಗಲೋ ನಡೆಸುವ ಕಿರು ಕೋಳಿಕಟ್ಟದಿಂದ ಹಿಡಿದು ಸಾವಿರಾರು ಜನ ಸೇರುವ ರಾತ್ರಿ ಹಗಲೂ ಇತ್ಯರ್ಥವಾಗದ ದೊಡ್ಡ ಮಟ್ಟದ ಕೋಳಿ ಅಂಕದವರೆಗೂ ಕೋಳಿ ಅಂಕ ಜರುಗುವುದಿದೆ. ಕೋಳಿಅಂಕಕ್ಕೆ ಬೇಕಾದ ಹುಂಜಗಳನ್ನು ಆಯ್ಕೆ ಮಾಡುವುದು ಅವುಗಳನ್ನು ಬೆಳೆಸುವುದು ಅದೇ ಒಂದು ಹವ್ಯಾಸ. ಕೋಳಿಗಳನ್ನು ಕಟ್ಟುವ ಹಗ್ಗದ ರಚನೆಯಲ್ಲಿ, ಕೋಳಿಯ ಕಾಲಿಗೆ ಬಾಳು ಕಟ್ಟುವುದರಲ್ಲಿ ಕುಶಲತೆ ಕಲಾತ್ಮಕತೆಯಿದೆ. ಕೋಳಿಕಟ್ಟದ ಹುಚ್ಚು ಕೆಲವೊಮ್ಮೆ ಮಿತಿ ಮೀರುವುದೂ ಉಂಟು. ದೇರೆ ಬೈದ್ಯ ಎಂಬುವನು ತನಗೆ ಬೇಕಾದ ಹುಂಜಗಳನ್ನು ಪಡೆಯುವ ಆಶೆಯಿಂದ ಮದುವೆಯಾಗಿದ್ದ ತನ್ನ ತಂಗಿಯನ್ನೇ ಕಾಂತು ಬೈದ್ಯ ಎಂಬವನಿಗೆ ಒಪ್ಪಿಸುವ 'ವಿಚಿತ್ರ ಸ್ವಾರ್ಥ' ಜುಮಾದಿ ದೈವದ ಒಂದು ಪಾಡ್ದನದಲ್ಲಿದೆ. ಕೋಳಿಕಟ್ಟದಲ್ಲಿ ಹಣವನ್ನು ಕಟ್ಟಿ ಜೂಜಾಡು ವುದೂ ಇದೆ.' (1987 : 6)

ವಾಮನ ನಂದಾವರ ಅವರು ಕೋಳಿಅಂಕಕ್ಕೆ ಸಂಬಂಧಿಸಿದಂತೆ ಪ್ರಚಲಿತದಲ್ಲಿರುವ ಸಾಹಿತ್ಯದ ಬಗೆಗೂ ಗಮನ ಹರಿಸಿರುವುದು ಉಲ್ಲೇಖನೀಯವಾಗಿದೆ.

ಪೀಟರ್ ಜೆ. ಕ್ಲಾಸ್. ಅವರು ಹೇಳುವಂತೆ (ತುಳುವ ದರ್ಶನ 1987) '' ತುಳು ನಾಡಿನಲ್ಲಿ ಕೋಳಿ ಅಂಕವು ಒಂದು ಜನಪ್ರಿಯ ಮನರಂಜನೆಯಾಗಿ ಪ್ರಚಾರದಲ್ಲಿದೆ. ಸಾಮಾನ್ಯವಾಗಿ ಗೆದ್ದ ಕೋಳಿಯ ಯಜಮಾನನಿಗೆ ದೊಡ್ಡ ಮೊತ್ತದ ಬಹುಮಾನ ಸಲ್ಲುತ್ತದೆ. ಇದನ್ನು ದೊಡ್ಡ ಪ್ರತಿಷ್ಠೆಯೆಂದು ತಿಳಿಯಲಾಗುತ್ತದೆ.... ಕೆಲವರು ಈ ಜೂಜಿನ ಆಟದಲ್ಲಿ ಮಗ್ನರಾಗಿ ದೊಡ್ಡ ಪ್ರಮಾಣದ ಹಣವನ್ನು ಸುರಿದು ಹೆಸರು ವಾಸಿಯಾದ ಕೋಳಿಗಳನ್ನು ಪಡೆಯುತ್ತಾರೆ. ಪ್ರಾಯಶಃ ಹಳ್ಳಿಗಳ ವ್ಯವಸಾಯ ನಿರತ ಮನೆಗಳ ಸದಸ್ಯರು ವಿಶೇಷ ಆಹಾರ ಮತ್ತು ಎಚ್ಚರಿಕೆಯಿಂದ ಅಂಕದ ಕೋಳಿ ಗಳನ್ನು ಸಾಕುತ್ತಾರೆ. ಕೋಳಿ ಅಂಕ ಹಾಗೂ ಅದರೊಂದಿಗೆ ಸಂಬಂಧಿಸಿದ ಕೋಳಿ ಜೂಜು ತುಳು ಜನರ ಒಂದು ಸ್ಥಳೀಯ ಗೀಳು ಎನ್ನಬಹುದು.... ಯಾರೇ ಸೋಲಲಿ, ಎರಡೂ ಪಕ್ಷದವರಲ್ಲಿ ಸಮಾನ ಸಂಭ್ರಮ ಉತ್ಸಾಹ ಇದ್ದೇ ಇರುತ್ತದೆ.

ನಿಜವಾಗಿ ಅವು ದೇವತೆಯನ್ನು ರಕ್ತ ಬಲಿಯ ಮೂಲಕ ಸಂತೃಪ್ತಿಗೊಳಿಸುವುದರಿಂದ ಇಬ್ಬರಿಗೂ ದೇವತೆಯ ಮಂಗಲಕರ ಪ್ರಸಾದ ದೊರಕುವುದಾಗಿ ತಿಳಿಯುತ್ತಾರೆ.'' (1985 : 225)

ಪೀಟರ್. ಜೆ. ಕ್ಲಾಸ್. ಅವರು ಕೋಳಿ ಅಂಕದ ಕೋಳಿಗಳನ್ನು ಸಾಕುವ ಕ್ರಮದಿಂದ ಅವುಗಳನ್ನು ಕಾಳಗ ಮಾಡಿಸುವ ಉದ್ದೇಶ ಏನು ಎಂಬ ಬಗೆಗೂ ಚಿಂತಿಸಿರುವುದು ಗಮನಿಸಬಹುದಾದ ಅಂಶವಾಗಿದೆ.

ಬಿ. ಶಿವರಾಮ ಶೆಟ್ಟಿ ಅವರು ವಯಸ್ಕರ ಶಿಕ್ಷಣಕ್ಕಾಗಿ ಬರೆದ 'ಕೋಳಿ ಅಂಕ' (1989) ಕೃತಿಯಲ್ಲಿ ವಿಷಯ ಮಂಡನೆಗೆ ಸಂಭಾಷಣೆಯ ತಂತ್ರವನ್ನು ಅನುಸರಿಸಿರುತ್ತಾರೆ. 'ನೋಡು.... ಅಲ್ಲೊಂದು ಕೋಳಿ ಇದೆಯಲ್ಲ.... ಬಿಳಿಯಾಗಿರೋದು.... ಅದು ಬೊಳ್ಳ, ಬೊಳ್ಳಯಲ್ಲಿ ಮಡಿಬೊಳ್ಳ, ಕೊಂಗುರ್ಬೊಳ್ಳ, ಪೆರಡಿಂಗ ಬೊಳ್ಳ, ಕಾವೆಬೊಳ್ಳ, ಹಳದಿಬೊಳ್ಳ ಎಂದು ಇದೆ. ಮೈಯ್ಯ ಮೇಲೆ ಬೂದು ಹಾಗೂ ಬಿಳಿ ಬಣ್ಣದ ಚುಕ್ಕೆಗಳಿರುವ ಕೋಳಿಗಳನ್ನು 'ಕಡ್ಲೆ' ಎನ್ನುತ್ತಾರೆ. ಕಡ್ಲೆಯಲ್ಲಿ ಬಂಗಾರ್ ಕಡ್ಲೆ, ಕೆಂಪು ಕಡ್ಲೆ, ಪಂಚಣಿ ಕಡ್ಲೆ ಎಂದು ಇದೆ. ಮೈಯ್ಪೆ, ಮಂಜಲೆ, ಉರಿಯೆ ಎಂದು ಇನ್ನು ಕೆಲವು ಜಾತಿಯ ಕೋಳಿಗಳಿವೆ. ಇವುಗಳಲ್ಲಿ ಕೂಡಾ ಬಣ್ಣಕ್ಕೆ ಅನುಸಾರವಾಗಿ ಬೇರೆ ಬೇರೆ ಹೆಸರುಗಳಿವೆ. 'ಪೆರಡಿಂಗ' ಅನ್ನುವುದು ಇನ್ನೊಂದು ಜಾತಿ. (1989 : 9)

ಶಿವರಾಮಶೆಟ್ಟರು ಕೋಳಿಗಳ ಹೆಸರು, ದೂಡು, ಪತಿ ಮಾಡುವುದು, ಬಾಳು ಕಟ್ಟುವುದು, ಕೋಳಿಯ ಕಾಳಗ, ಆರೈಕೆ, ಕೋಳಿಕುಂಟ, ಬಗೆ ಬಗೆಯ ಕಟ್ಟಗಳು, ಈ ರೀತಿಯಲ್ಲಿ ಒಂದಾದ ಮೇಲೊಂದನ್ನು ವಿವರವಾಗಿ ಪರಿಚಯಿಸಲು ಪ್ರಯತ್ನಿಸುತ್ತಾರೆ. ಅಗತ್ಯವಿರುವಲ್ಲಿ ಚಿತ್ರಗಳನ್ನು ಬಳಸಿರುತ್ತಾರೆ. ವಯಸ್ಕರಿಗಾಗಿ ಬರೆದ ಪುಸ್ತಕ ಇದಾದ್ದರಿಂದ ವಿಷಯವನ್ನು ಆಕರ್ಷಕವಾಗಿರಿಸಲು ಪ್ರಯತ್ನಿಸಿರುತ್ತಾರೆ.

ಅಭಿಂತರ್ ಕಾಕ್ರಾಡಿ ಅವರು 'ಪನಿಂತಾರ' (1989) ಲೇಖನದಲ್ಲಿ ಕೋಳಿ ಕಟ್ಟದ ಬಗ್ಗೆ ಹೀಗೆ ಬರೆದಿರುತ್ತಾರೆ. ''ತುಳುನಾಡ್ದ ನಾನೊಂಜಿ ಜನಪ್ರಿಯ ಜನಪದ ಕ್ರೀಡೆ ಕೋರಿದ ಕಟ್ಟ. ಈ ಕೋರಿದ ಕಟ್ಟ ನಮ್ಮ ತುಳುನಾಡ್ದ ಲೆಕೊನೇ ಭಾರತೊದ ಬೇತೆ ಕಡೆಟ್ ಬುಕ್ಕ, ಪಿದಾಯಿದೇಸೊಡುಲಾ ಪ್ರಸಿದ್ಧಿ ಪಡೆದ್ಂಡ್. ಕರ್ನಾಟಕೊದ ಉತ್ತರ ಭಾಗೊಡು ಇಪ್ಪುನ ಲಂಬಾಣಿ ಜನಾಂಗೊಡು ಈ ಕೋರಿದ ಕಟ್ಟದ ಒಂಜಿ ಪದ್ಧತಿ ಉಂಡು. ಅವ್ವತ್ತಂದೆ ಆಂಧ್ರ ಪ್ರದೇಸೊಡುಲಾ ಈ ಕೋರಿದ ಕಟ್ಟನ್ ನಡಪಪೆರ್. ಪಿದಾಯಿದೇಸೊಡು ಬಾಲಿ, ಇಂಡೋನೇಶ್ಯ, ಸ್ವೀಡನ್ ಈವೊಂತ ದೇಸೊಲೆಡ್ ಈ ಕೋರಿದ ಕಟ್ಟ ಉಂಡು.'' (1989 : 139) ( ತುಳುನಾಡಿನ ಇನ್ನೊಂದು ಜನಪ್ರಿಯ ಜನಪದ ಕ್ರೀಡೆ ಕೋಳಿ ಅಂಕ. ಈ ಕೋಳಿ ಅಂಕ ನಮ್ಮ ತುಳುನಾಡಿನಂತೆಯೇ ಭಾರತದ ಬೇರೆ ಭಾಗದಲ್ಲಿ ಮತ್ತು ಹೊರದೇಶಗಳಲ್ಲೂ ಪ್ರಸಿದ್ಧಿ ಪಡೆದಿದೆ. ಕರ್ನಾಟಕದ ಉತ್ತರ ಭಾಗದಲ್ಲಿ ಇರುವ ಲಂಬಾಣಿ ಜನಾಂಗದಲ್ಲಿ ಈ ಕೋಳಿ ಅಂಕದ ಒಂದು ಪದ್ಧತಿ ಇದೆ. ಅದಲ್ಲದೆ ಆಂಧ್ರ ಪ್ರದೇಶದಲ್ಲೂ ಈ ಕೋಳಿ ಅಂಕವನ್ನು ನಡೆಸುತ್ತಾರೆ. ಹೊರದೇಶದಲ್ಲಿ ಬಾಲಿ, ಇಂಡೋನೇಶ್ಯ, ಸ್ವೀಡನ್ ಈ ಎಲ್ಲ ದೇಶದಲ್ಲಿ ಈ ಕೋಳಿ ಅಂಕ ಇದೆ. )

ಅಭಿಂತರ್ ಕಾಕ್ರಾಡಿ ಅವರ ಲೇಖನದಲ್ಲಿ ಕೋಳಿ ಅಂಕ ಭಾರತದ ಇತರ ಭಾಗದಲ್ಲಿ ಮಾತ್ರವಲ್ಲದೆ ಹೊರದೇಶಗಳಲ್ಲೂ ನಡೆಯುತ್ತದೆ ಎಂಬ ಮಾತುಗಳು ಉಲ್ಲೇಖನೀಯವಾಗಿದೆ.

ಡಿ.ಆರ್. ಪಾಂಡುರಂಗ ಇವರ ಮಹಾಪ್ರಬಂಧ (1990) ದಲ್ಲಿ ಕೋಳಿ ಕಟ್ಟದ ಬಗ್ಗೆ ವಿವರಗಳಿವೆ. ಅವರು ಹೀಗೆ ಬರೆದಿರುತ್ತಾರೆ. ''ಈ ಜಿಲ್ಲೆಯಲ್ಲಿ ಸಾಮಾನ್ಯ ಎಲ್ಲ ಕಡೆಯೂ ಆಡುವ ಆಟ. ಇದು ಒಂದು ರೀತಿಯ ಜೂಜು ಆಗಿ ಈಗ ಉಳಿದಿದೆ. ಹಿಂದೆ ಕೇವಲ ಮನರಂಜನೆ ಇದರ ಉದ್ದೇಶವಾಗಿತ್ತು. ಇದನ್ನು ಜೂಜಾಟದಂತೆ ಈಗ ನಡೆಸುತ್ತಿರುವುದರಿಂದ ಸ್ಪರ್ಧೆಗೆ ಯಾವಾಗಲೂ ಕೋಳಿಗಳು ಅಧಿಕ. .... ಕೋಳಿ ಅಂಕವೆಂದರೆ ಎರಡು ಹುಂಜಗಳ ನಡುವೆ ನಡೆಯುವ ಕಾದಾಟ.

ಇದನ್ನು ನಡೆಸಲು ಎಲ್ಲರಂತೆ ಭೈರರೂ ಕೋಳಿ(ಹುಂಜ)ಗಳನ್ನು ಸಾಕುತ್ತಾರೆ. ಇವುಗಳನ್ನು 'ಜಳ್ಳ' 'ಪೆರಡಿಂಗ' ಗರುಡ ಕೆಂಚಾಳಿ, ಬೂಬ, ಕರಬೂಬ, ಬೆಳಿಯ, ಪಂಚವರ್ಣ, ಕೆಂಪ, ಉರಿಯ ಮುಂತಾಗಿ ಬಣ್ಣಗಳ ಮೇಲೆ ಹೆಸರಿಟ್ಟು ವಿಂಗಡಿಸುತ್ತಾರೆ. (1990 : 80)

ಇವರ ಪ್ರಕಾರ ಕೋಳಿ ಅಂಕವನ್ನು ಜನ ಮನರಂಜನೆಗೆಂದು ಆಡುತ್ತಿದ್ದು, ಈಗ ಅದು ಜೂಜಾಟವಾಗಿ ಪರಿವರ್ತನೆ ಹೊಂದಿದೆ.

ಕೆ. ಚಿನ್ನಪ್ಪಗೌಡ ಇವರ ಮಹಾಪ್ರಬಂಧ (1990) ದಲ್ಲಿ ಕೋಳಿಗೂಟ (ಕೋರಿಗೂಂಟ)ದ ಬಗೆಗೆ ವಿವರಗಳಿವೆ. ''ಭೂತಾರಾಧನೆಯ ಸಂಬಂಧವಾಗಿ ಅದರ ಹೊರಗಡೆ ನಡೆಯುವ ಕೋಳಿ ಅಂಕದ ಪ್ರಾರಂಭದ ವಿಧಿಯಾಗಿ 'ಕೋರಿಗೂಂಟ' (ಕೋಳಿಗೂಟ) ದ ವಿಧಿಯು ಜರಗುತ್ತದೆ. ಭೂತಾರಾಧನೆಯ ಆಚರಣಾತ್ಮಕ ಉತ್ಸವಕ್ಕಿಂತ ಮೊದಲು ಕೆಲವು ದಿನಗಳು ಮತ್ತು ಅನಂತರದ ಕೆಲವು ದಿನಗಳಲ್ಲಿ ಕೋಳಿ ಅಂಕವು ನಡೆಯುತ್ತದೆ. ಪಾಲೆಮರದ ಸಣ್ಣ ಆರು ಗೂಟಗಳನ್ನು ಕಡಿದು ಹೆಗಲ ಮೇಲೆ ಹೊತ್ತುಕೊಂಡು ತಂದು ಕೋಳಿ ಅಂಕ ನಡೆಯುವ ಸ್ಥಳದಲ್ಲಿ (ಕೆಲವು ಸ್ಥಳಗಳಲ್ಲಿ ಅಂಗಣದ ಪ್ರವೇಶ ದ್ವಾರದಲ್ಲಿ) ಮೂರು ಮೂರು ಗೂಟಗಳನ್ನು ಸಾಲಾಗಿ ಎದುರು ಬದುರು ನೆಡುತ್ತಾರೆ. ಈ ಗೂಟಕ್ಕೆ ಕೋಳಿಗಳನ್ನು ತಂದು ಕಟ್ಟುತ್ತಾರೆ. ಈ ಸಂದರ್ಭದಲ್ಲಿ ಕೋಳಿಯ ಕಾಲಿಗೆ 'ಬಾಳು' (ಹರಿತವಾದ ಸಣ್ಣ ಚೂರಿ) ಕಟ್ಟುವ ವ್ಯಕ್ತಿ, ಗೌಡ, ಪೂಜಾರಿ, ಮಾನಿ ಮತ್ತು ಗುತ್ತಿನ ಮನೆಯವರು ಇರುತ್ತಾರೆ. ಭೂತದ ಸನ್ನಿಧಿಯಲ್ಲಿ ಬಾಳನ್ನು ಇಟ್ಟು ಕೋಳಿ ಅಂಕವನ್ನು ಸಾಂಗವಾಗಿ ನಡೆಸಿ ಕೊಡುವಂತೆ ಭೂತವನ್ನು ವಿನಂತಿಸಿಕೊಳ್ಳುತ್ತಾರೆ. ಗೂಟಗಳನ್ನು ನೆಡುವಾಗ ಯಾವದಿಕ್ಕಿಗೆ ಅವುಗಳು ಬಾಗಿ ನಿಲ್ಲುತ್ತವೆ, ಎಂಬುದರ ಮೇಲೆ ಸ್ಥಳೀಯರ ಸೋಲು ಗೆಲುವು ನಿರ್ಣಯವಾಗುತ್ತದೆ ಎಂದು ಜನಪದರು ನಂಬುತ್ತಾರೆ.

ಕೋಳಿ ಅಂಕದಂತಹ ಕ್ರೀಡೆಯಲ್ಲಿ ಅಪಾಯ ಮತ್ತು ಅದೃಷ್ಟದ ಅಂಶಗಳು ಅಡಕವಾಗಿರುವುದರಿಂದ ಅಲೌಕಿಕವಾದ ಭೂತವನ್ನು ಸ್ಮರಿಸಿಕೊಳ್ಳುತ್ತಾರೆ. (1990 : 75)

ಕೋಳಿ ಅಂಕ ನಡೆಯುವ ಮೊದಲು ಕೋಳಿಗೂಟದ ವಿಧಿಯನ್ನು ಇವರು ವಿವರಿಸಿರುವುದು ಉಲ್ಲೇಖನೀಯವಾಗಿದೆ.

ತರಂಗ ವಾರಪತ್ರಿಕೆ ( ಏಪ್ರಿಲ್ 5, 1992) ಯಲ್ಲಿ ನಿರಂಜನ ವಾನಳ್ಳಿ ಅವರು ಬರೆದ ಲೇಖನ ಕೋಳಿ ಅಂಕದ ಬಗೆಗೆ ಸಾಕಷ್ಟು ಮಾಹಿತಿಗಳನ್ನು ಒದಗಿಸುತ್ತದೆ. ಅವರು ಹೀಗೆ ಬರೆದಿರುತ್ತಾರೆ. ''ಅನಾದಿ ಕಾಲದಿಂದ ದಕ್ಷಿಣ ಕನ್ನಡದ ಮಣ್ಣಿಗೆ ಕೋಳಿ ರಕ್ತದ ವಾಸನೆ ಇದೆ. ಕೋಳಿ ಅಂಕ ಈ ಜಿಲ್ಲೆಯ ಅವಿಭಾಜ್ಯ ಅಂಗವೇ ಆಗಿ ಹೋಗಿದೆ. ಇದು ಇಲ್ಲಿಯ ಜಾನಪದ ಕ್ರೀಡೆ. ಹೇಗೆಂದರೂ ತಿನ್ನಲಿಕ್ಕೇ ಸಾಕುವ ಈ ಕೋಳಿಗಳನ್ನು ಕೊಲ್ಲುವ ಮುನ್ನ ಸ್ವಲ್ಪ ಆಟವಾಡಿಸಿ ಖುಷಿ ಪಡುವ ಉಮೇದು ಈ ಕೋಳಿ ಅಂಕ. ಶುದ್ಧ ಮನೋರಂಜನೆಯಾಗಿ ಆರಂಭವಾದ ಈ ಆಟದ ಕಥೆ ಕೇಳಿ. ಈಗ ಅದು ನಡೆಯುವುದು ಸಾರಾಯಿ ಅಂಗಡಿಗಳ ಪಕ್ಕದಲ್ಲಿ, ಅಂಗಡಿಯ ಮಾಲಕರೇ ಅಂಕ ನಡೆಸುವವರು. ಅವರ ಆಸ್ಥೆಯೆಂದರೆ ಅಂಕಕ್ಕೆ ಬಂದವರು ಸಾರಾಯಿ ಕುಡಿಯುತ್ತಾರೆ. ಜೂಜಿನಲ್ಲಿ ಗೆದ್ದರೆ ಖುಷಿಯಿಂದಲೂ, ಸೋತರೆ ನೋವಿನಿಂದಲೂ ಮತ್ತೂ ಕುಡಿಯುತ್ತಾರೆ. ಹೀಗಾಗಿ ಈಗ ಲಾಭ ಮಾಡಲು ಸಾರಾಯಿ ಅಂಗಡಿಗಳ ಮಾಲಕರು ಕಂಡುಕೊಂಡ ಸುಲಭದ ಉಪಾಯ — ಕೋಳಿ ಅಂಕ. (1992 : 54)

ಕೋಳಿ ಅಂಕದ ಬಗೆಗೆ ವಿವರವಾಗಿ ಈ ಲೇಖನದಲ್ಲಿ ಹೇಳಿರುವ ವಾನಳ್ಳಿಯವರು ಕೋಳಿ ಅಂಕದ ಆಧುನಿಕತೆಯನ್ನು ತೆರೆದಿಡುವ ಪ್ರಯತ್ನ ಮಾಡಿರುತ್ತಾರೆ. ಇವರು ಲೇಖನದಲ್ಲಿ ಕಾಲಿಗೆ ಬಾಳು, ಕುಕ್ಕುಟ ಪಂಚಾಂಗ, ಕೋಳಿಗೆ ಆಪರೇಶನ್ ಈ ಮುಂತಾದ ಭಾಗಗಳಲ್ಲಿ ಕೋಳಿ ಅಂಕವನ್ನು ಪರಿಚಯಿಸುತ್ತಾರೆ.

ಬರ್ನೆಲ್ ಅವರ 'ಕೊಡಮಣಿತ್ತಾಯನ ಕಟ್ಟು ಕಟ್ಟಳೆ' (1894) ಗಳಿಗೆ ಸಂಬಂಧಿಸಿದ ಐತಿಹ್ಯವನ್ನು ಹೋಲುವ ಹೇಳಿಕೆಗಳಲ್ಲಿ ಕೋಳಿ ಅಂಕದ ಬಗೆಗೆ ವಿವರಗಳಿವೆ. ಅದರಂತೆ 'ಎಕ್ಕಾರಿನ ದುಗ್ಗಣ ಕಾವೆರ್ ಮತ್ತು ತಿಬೇರದ ತಿಮ್ಮಾಂತಿಕಾರಿಗಳು ಕೋಳಿ ಅಂಕ ಮತ್ತು ಎತ್ತುಗಳ ಬಗೆಗೆ ನುರಿತವರಾಗಿದ್ದು (ವಿಶೇಷ ಅರಿವುಳ್ಳವರಾಗಿದ್ದು) ಅವರು ಪಗ್ಗು ನಂತರದ ಬೇಸ್ಯ ತಿಂಗಳಲ್ಲಿ ಇನ್ನೂರ ಮೂವತ್ತು ಕೋಳಿ ಬಾಳು (ಕೋಳಿ ಕಾಳಗದ ಸಂದರ್ಭದಲ್ಲಿ ಅದರ ಹಿಮ್ಮಡಿಗೆ ಕಟ್ಟುವ ಮೊನಚಾದ ಉಕ್ಕಿನ ಮೊನೆ) ಮತ್ತು ನಾಲ್ಕು ಅಥವಾ ಎಂಟು ಕೋಳಿಗಳೊಂದಿಗೆ ಸಾಧಾರಣ ಮೂವತ್ತರಿಂದ ಐವತ್ತು ಮಂದಿಯನ್ನು ಸೇರಿಸಿಕೊಂಡು ಕೋಳಿ ಅಂಕಕ್ಕಾಗಿ 'ಎಕ್ಕಾರ ಪರಾರ' ಎಂಬ ಗ್ರಾಮವನ್ನು ದಾಟಿ ಹೋದುದಾಗಿ' ತಿಳಿದು ಬರುತ್ತದೆ; (ನೋಡಿ: ಎ.ಸುಬ್ಬಣ್ಣ ರೈ; 1994 : 110)

ಮೇಲಿನ ಎಲ್ಲಾ ಲೇಖನ ಮತ್ತು ಕೃತಿಗಳನ್ನು ಗಮನಿಸಿದಾಗ ಕೆಲವು ಅಂಶಗಳು ಸ್ಪಷ್ಟವಾಗುತ್ತವೆ. ಮುಖ್ಯವಾಗಿ ಎಲ್ಲರೂ ಕೋಳಿ ಅಂಕವನ್ನು ಮನರಂಜನೆಯ ಸಾಧನವೆಂದೇ ಗ್ರಹಿಸುತ್ತಾರೆ. ಕೋಳಿಯ ಬಣ್ಣ ಮತ್ತು ಹೆಸರುಗಳ ಬಗೆಗೆ ಹೆಚ್ಚಿನವರು ಆಸಕ್ತಿ ವಹಿಸುತ್ತಾರೆ. ಇಷ್ಟಿದ್ದರೂ ಕೋಳಿ ಅಂಕದ ಸಾಂದರ್ಭಿಕ ವಿವರಗಳನ್ನಾಗಲಿ, ಕೋಳಿ ಅಂಕದ ಕಾರ್ಯವನ್ನಾಗಲಿ ಯಾರೂ ವಿವರಿಸಿಲ್ಲ. ಮುಖ್ಯವಾಗಿ ಈ ಲೇಖನಗಳು ಮತ್ತು ಕೃತಿಗಳನ್ನು ಸಾಂದರ್ಭಿಕವಾಗಿ ಬರೆದಿರುವುದರಿಂದ ಅವು ಸಮಗ್ರವಾಗಿಲ್ಲ. ಪ್ರಸ್ತುತ ಅಧ್ಯಯನವು ಕೋಳಿ ಅಂಕವನ್ನು ಸಮಗ್ರವಾಗಿ ವಿಶ್ಲೇಷಿಸಲು ಪ್ರಯತ್ನಿಸುತ್ತದೆ.

## 2. ಅಧ್ಯಯನದ ಸೈದ್ಧಾಂತಿಕ ಚೌಕಟ್ಟು.

ಪ್ರಾಣಿಸಂಬಂಧಿಯಾದ ಆಚರಣೆಗಳನ್ನು ಹೇಗೆ ಅಧ್ಯಯನ ಮಾಡಬೇಕು ಎಂಬುದು ಒಂದು ದೊಡ್ಡ ಸಮಸ್ಯೆ. ಇವುಗಳನ್ನು ಚಾರಿತ್ರಿಕವಾಗಿ ನೋಡಲು ತುಂಬಾ ಕಷ್ಟವಾಗುತ್ತದೆ. ಯಾಕೆಂದರೆ ಇಂತಹ ವಿಶ್ಲೇಷಣೆಗೆ ಬೇಕಾದ ಸಾಮಗ್ರಿಗಳು ನಮಗೆ ದೊರಕುವುದಿಲ್ಲ. ರಾಚನಿಕವಾಗಿ ನೋಡುವುದು ಕೂಡಾ ತುಂಬಾ ತ್ರಾಸದಾಯಕ. ಯಾಕೆಂದರೆ ಕೋಳಿಅಂಕದ ರಾಚನಿಕ ಘಟಕಗಳು ಆಗಾಗ ಬದಲಾಗುತ್ತಿರುತ್ತಲೇ ಇರುತ್ತವೆ. ಇದರ ಜೊತೆಗೆ ಜಾನಪದ ಸಿದ್ಧಾಂತಗಳ ಸಮಸ್ಯೆಗಳು ಸೇರಿಕೊಳ್ಳುತ್ತವೆ. ಅನೇಕ ಜಾನಪದ ಸಿದ್ಧಾಂತಗಳು ಜನಪದ ಕತೆಗಳನ್ನು ಆಧರಿಸಿಕೊಂಡು ಹುಟ್ಟಿವೆ. ಇಂತಹ ಸಿದ್ಧಾಂತಗಳು ವಿಷಯನಿಷ್ಠ ಜಾನಪದದ ಅಧ್ಯಯನಕ್ಕೆ ಅಷ್ಟಾಗಿ ಸಹಕರಿಸುವುದಿಲ್ಲ. ಕನ್ನಡದಲ್ಲಾಗಲಿ, ಇಂಗ್ಲೀಷಿನಲ್ಲಾಗಲಿ ಇಂತಹ ವಿಷಯಗಳಿಗೆ ಮಾದರಿಯಾಗಿ ನಿಲ್ಲಬಲ್ಲಂತಹ ಅಧ್ಯಯನಗಳು ನಡೆದಂತಿಲ್ಲ. ಹೀಗಾಗಿ ಕೋಳಿಅಂಕದ ಅಧ್ಯಯನಕ್ಕೆ ಬೇಕಾದ ಸೈದ್ಧಾಂತಿಕ ಚೌಕಟ್ಟೊಂದನ್ನು ಪೂರ್ವಭಾವಿಯಾಗಿ ತರ್ಕಿಸಿಕೊಳ್ಳಲು ಸಾಧ್ಯವಾಗಿಲ್ಲ.

ಇಷ್ಟಿದ್ದರೂ ಈಗಾಗಲೇ ಹೇಳಿದಂತೆ ವಿಷಯನಿಷ್ಠ ಜಾನಪದ ಅಧ್ಯಯನದ ಚೌಕಟ್ಟಿನಲ್ಲಿಯೇ ಪ್ರಸ್ತುತ ಅಧ್ಯಯನವನ್ನು ನಡೆಸಲಾಗಿದೆ. ಇಂತಹ ಅಧ್ಯಯನದಲ್ಲಿ ಮೂರು ಹಂತಗಳಿರುತ್ತವೆ. ಮೊದಲನೆಯದಾಗಿ ಒಂದು ವಿಷಯಕ್ಕೆ ಸಂಬಂಧಿಸಿದಂತೆ ಲಭ್ಯವಿರುವ ಎಲ್ಲ ಸಾಮಗ್ರಿಗಳನ್ನು ಕಲೆಹಾಕುವುದು. ಎರಡನೆಯದಾಗಿ ಕಲೆಹಾಕಿದ ಮಾಹಿತಿಗಳನ್ನು ವರ್ಗೀಕರಿಸಿಕೊಳ್ಳುವುದು. ಮೂರನೆಯದಾಗಿ ವರ್ಗೀಕರಿಸಿದ ಮಾಹಿತಿಗಳನ್ನು ವಿವರವಾಗಿ ಮಂಡಿಸಿ ಅವುಗಳ ಹಿಂದಿನ ಸಾಮಾಜಿಕ ತರ್ಕವನ್ನು ಗ್ರಹಿಸಲು ಪ್ರಯತ್ನಿಸುವುದು. ಪ್ರಸ್ತುತ ಅಧ್ಯಯನದಲ್ಲಿ ಇಂತಹ ಪ್ರಯತ್ನವನ್ನು ಮಾಡಲಾಗಿದೆ.

# ಅಧ್ಯಾಯ ಮೂರು

## 3. ಕೋಳಿಅಂಕದ ಸಾಂದರ್ಭಿಕ ಮಾಹಿತಿಗಳು

3.1: ಭೌಗೋಳಿಕ ವಿವರ

3.2: ಸಾಮಾಜಿಕ ವಿವರ

3.3: ಸಾಂಸ್ಕೃತಿಕ ವಿವರ

3.4: ಧಾರ್ಮಿಕ ವಿವರ

3.5: ಆರ್ಥಿಕ ವಿವರ

# 3. ಕೋಲಿಅಂಕದ ಸಾಂದರ್ಭಿಕ ಮಾಹಿತಿಗಳು

ಕೋಳಿಅಂಕಕ್ಕೆ ಸಂಬಂಧಿಸಿದಂತೆ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕಾಸರಗೋಡು ಜಿಲ್ಲೆಗಳಲ್ಲಿ ವ್ಯಾಪಕ ಕ್ಷೇತ್ರಕಾರ್ಯ ಮಾಡಲಾಗಿದೆ. ಈ ಭಾಗದಲ್ಲಿನ ಭಾಗೋಲಿಕ ಸಂದರ್ಭ, ಸಾಮಾಜಿಕ ಸಂದರ್ಭ, ಸಾಂಸ್ಕೃತಿಕ ಸಂದರ್ಭ, ಧಾರ್ಮಿಕ ಸಂದರ್ಭ ಮತ್ತು ಆರ್ಥಿಕ ಸಂದರ್ಭಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

3.1: ಭೂಗೋಲಿಕ ಸಂದರ್ಭ: ದಕ್ಷಿಣ ಕನ್ನಡ ಜಿಲ್ಲೆ 8441 ಚ.ಕಿ.ಮೀ. ವಿಸ್ತೀರ್ಣವಿದ್ದು, ಕರ್ನಾಟಕ ರಾಜ್ಯದ ಒಟ್ಟು ವಿಸ್ತೀರ್ಣದ ಶೇ. 4.4 ರಷ್ಟು ನೆಲವನ್ನು ಹೊಂದಿದೆ. ವಿಸ್ತೀರ್ಣದಲ್ಲಿ ಈ ಜಿಲ್ಲೆ ರಾಜ್ಯದಲ್ಲಿ ಹನ್ನೆರಡನೆಯ ಸ್ಥಾನ ದಲ್ಲಿದೆ. ಜನಸಂಖ್ಯೆಯಲ್ಲಿ ಜಿಲ್ಲೆಗೆ ಆರನೆಯ ಸ್ಥಾನವಿದೆ. ಮಳೆ ಮತ್ತು ತಂಪು ಹವೆಯಿಂದಾಗಿ ಬೆಳ್ತಂಗಡಿ, ಕುಂದಾಪುರ, ಕಾರ್ಕಳ, ಸುಳ್ಯ ತಾಲೂಕುಗಳ ಕೆಲವು ಭಾಗಗಳು ಅರಣ್ಯಮಯವಾಗಿವೆ.

ದಕ್ಷಿಣ ಕನ್ನಡ ಜಿಲ್ಲೆಯ ಜನರ ಮುಖ್ಯ ಕಸುಬು ಕೃಷಿ. ಭತ್ತವನ್ನು ಆರ್ಥಿಕತೆಯ ಬೆಳೆಯಾಗಿ ಬೆಳೆಸುತ್ತಾರೆ. ಆದರೆ ಆಹಾರ ಧಾನ್ಯಗಳ ಮಟ್ಟಿಗೆ ಸ್ವಯಂ ಪೂರ್ಣ ಜಿಲ್ಲೆಯಾಗಿಲ್ಲ. ಭತ್ತದ ಜೊತೆಗೆ, ಉದ್ದು, ಹೆಸರು, ಎಳ್ಳು, ನೆಲಕಡಲೆ, ಕಬ್ಬು, ಮುಂತಾದ ಬೆಳೆಗಳನ್ನು ಬೆಳೆಸುತ್ತಾರೆ. ಅಡಿಕೆ, ತೆಂಗು, ಬಾಳೆ, ಕೊಕ್ಕೊ ಗಳನ್ನು ಕೂಡಾ ಜನ ವಾಣಿಜ್ಯ ಬೆಳೆಯಾಗಿ ಬೆಳೆಸುತ್ತಾರೆ.

ಜನರು ತಮ್ಮ ಕೆಲಸ ಮುಗಿಸಿ, ಉಳಿದ ಸಮಯದಲ್ಲಿ ಮನರಂಜನೆ ಬಯಸು ವುದು ಸರ್ವಸಾಮಾನ್ಯ. ಅದಕ್ಕಾಗಿ ನಾಟಕ, ಯಕ್ಷಗಾನಗಳಿಗೆ ಕೆಲವರು ಹೋಗು ತ್ತಾರೆ. ಕೆಲವರು ಒಳಮನೆಯ ಆಟಗಳಾದ, ಚೆನ್ನೆಮಣೆ, ಇಸ್ಪೀಟು, ಚದುರಂಗ, ಹಾವುಏಣಿ ಮುಂತಾದ ಆಟಗಳಲ್ಲಿ ಭಾಗಿಗಳಾಗುತ್ತಾರೆ.

ದೇವಾಲಯಗಳಲ್ಲಿ ಜಾತ್ರೆಯ ಸಂದರ್ಭದಲ್ಲಿ ಮತ್ತು ವಾರದಲ್ಲಿ ಒಂದು ದಿನ ತಮ್ಮ ತಮ್ಮ ಹಳ್ಳಿಗಳ ಶರಾಬು ಅಂಗಡಿಯ ಬಳಿಯಲ್ಲಿ ನಡೆಸುವ ಕೋಳಿ ಅಂಕಗಳ ಮೂಲಕವು ಜನ ಮನರಂಜನೆ ಗಳಿಸುವುದು ತುಳುನಾಡಿನಲ್ಲಿ ಸಾಮಾನ್ಯ.

ಕೋಳಿ ಅಂಕವನ್ನು ನಡೆಸಲು ಜನ ಬಯಲು ಪ್ರದೇಶಗಳನ್ನು ಬಯಸುತ್ತಾರೆ. ಶರಾಬು ಅಂಗಡಿಯ ಬಳಿಯಲ್ಲಿ ಬಯಲು ಇಲ್ಲವಾದರೆ ತಾವೇ ಸೇರಿ ಜಾಗವನ್ನು ಸಮತಟ್ಟು ಮಾಡಿ ಕೋಳಿಅಂಕಕ್ಕೆ ಬೇಕಾದ ಸ್ಥಳವನ್ನು ರಚಿಸುತ್ತಾರೆ. ಜಾತ್ರೆಗಳು ವರ್ಷದಲ್ಲಿ ಒಂದು ಬಾರಿ ಬರುವುದರಿಂದಾಗಿ ಮನರಂಜನೆಗೆ ಸಮಯ ಕಡಿಮೆಯಾಗುವುದರಿಂದ ದೂರ ದೂರದ ಪ್ರದೇಶಗಳಿಗೂ ತಮ್ಮ ಕೋಳಿಯೊಂದಿಗೆ ಅಂಕಕ್ಕಾಗಿ ಜನ ಹೋಗುತ್ತಾರೆ.

ಈಚಿನ ದಿನಗಳಲ್ಲಿ ಶರಾಬು ಅಂಗಡಿಯ ಮಾಲಕರೇ ಕೋಳಿಅಂಕಕ್ಕೆ ಬೇಕಾದ ಜಾಗವನ್ನು ತಮ್ಮ ಅಂಗಡಿಯ ಬಳಿಯಲ್ಲಿ ನಿರ್ಮಿಸುತ್ತಾರೆ. ಇದರ ಉದ್ದೇಶ ಸ್ಪಷ್ಟ. ಕೋಳಿಅಂಕದಲ್ಲಿ ಗೆದ್ದರು ಸೋತರು ತಮಗೆ ಲಾಭವಿದೆ ಎಂದು ಇವರು ಅರಿತಿರುವುದೇ ಆಗಿದೆ.

ಶರಾಬು ಅಂಗಡಿಯ ಬಳಿಯಲ್ಲಿ ವಾರದಲ್ಲಿ ಒಂದು ಬಾರಿ ನಡೆಯುವ ಅಂಕಕ್ಕೆ ಸಾಯಂಕಾಲವಾಗುತ್ತಲೇ ಜನ ಹೊರಡುತ್ತಾರೆ. ಸಂಜೆಯ ಹೊತ್ತು ಅಂಕ ನಡೆಸಲು ಪ್ರಶಸ್ತ ಕಾಲ. ಜಾತ್ರೆಯ ಸಂದರ್ಭಗಳಲ್ಲಿ ಬೆಳಗ್ಗಿನಿಂದ ಸಂಜೆಯ ತನಕವೂ ಕೋಳಿ ಅಂಕ ನಡೆಯುತ್ತದೆ. ಅದಕ್ಕೆ ಅನುಗುಣವಾಗಿ ಬಯಲು ಪ್ರದೇಶಗಳ ಆಯ್ಕೆ ಅಲ್ಲಿ ನಡೆದಿರುತ್ತದೆ.

<u>3.2: ಸಾಮಾಜಿಕ ಸಂದರ್ಭ</u>: ದಕ್ಷಿಣ ಕನ್ನಡ ಮತ್ತು ಕಾಸರಗೋಡು ಜಿಲ್ಲೆಗಳು ಹಲವು ಧರ್ಮ ಜಾತಿಗಳಿಂದ ಕೂಡಿದ ಪ್ರದೇಶ. ಇಲ್ಲಿ ಹಿಂದು, ಮುಸ್ಲಿಂ, ಕ್ರಿಶ್ಚಿಯನ್, ಜೈನ ಮುಂತಾದ ಧರ್ಮಗಳ ಜನರಿರುತ್ತಾರೆ. ಈ ಧರ್ಮಗಳಲ್ಲಿ ಮತ್ತೆ ಒಳಪಂಗಡಗಳಿರುವುದನ್ನು ಕಾಣಬಹುದು. ಅವುಗಳಲ್ಲಿ ಕೆಲವರು ಮಾಂಸಾಹಾರಿ

ಗಳಾದರೆ, ಕೆಲವರು ಸಸ್ಯಾಹಾರಿಗಳು. ಎಲ್ಲ ಧರ್ಮದವರು ಕೋಳಿಅಂಕದಲ್ಲಿ ಭಾಗವಹಿಸುವುದಿಲ್ಲ. ಬ್ರಾಹ್ಮಣರು, ಜೈನರು ಸಾಮಾನ್ಯವಾಗಿ ಕೋಳಿಅಂಕದಲ್ಲಿ ಪಾಲ್ಗೊಳ್ಳುವುದಿಲ್ಲ. ಬಂಟರು, ಪೂಜಾರಿಗಳು, ಗೌಡರು, ಕುಲಾಲರು, ನಾಯ್ಕರು, ಮೇರರು, ಮನ್ಸರು, ಮುಗೇರರು, ಮೊಯಿಲರು, ಕೊರಗರು ಈ ಮುಂತಾದ ಜಾತಿಯವರು ಕೋಳಿಅಂಕದ ಮುಖ್ಯ ಪಾತ್ರಧಾರಿಗಳು. ಮೊದ ಮೊದಲು ಬಂಟ ಜನಾಂಗ ಮತ್ತು ಪೂಜಾರಿ ಜನಾಂಗದವರು ಕೋಳಿಅಂಕದಲ್ಲಿ ಹೆಚ್ಚಾಗಿ ಕಂಡು ಬರುತ್ತಿದ್ದರು. ಆದರೆ ಈಗ ಯಾವುದೇ ನಿಯಮವಿಲ್ಲದೆ ಆಸಕ್ತ ಜನರು ಭಾಗವಹಿಸುವುದನ್ನು ಕಾಣಬಹುದು.

ಮುಸ್ಲಿಂ ಧರ್ಮದವರು ಕೋಳಿಅಂಕದಲ್ಲಿ ಪಾಲ್ಗೊಳ್ಳುವುದು ಬಹಳ ವಿರಳ. ಅಲ್ಲಲ್ಲಿ ಒಂದಿಬ್ಬರು ಕೋಳಿಗಳನ್ನು ಕಾಳಗಕ್ಕೆ ಬಿಡುವುದು, 'ಬಾಳುಕಟ್ಟುವುದು' ಮಾಡುತ್ತಾರೆ ಎಂದು ನಿರೂಪಕರು ಹೇಳಿರುವುದುಂಟು. ಆದರೆ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಇವರು ಕಂಡು ಬರಲಿಲ್ಲ.

ಕ್ರಿಶ್ಚನ್ ಧರ್ಮದವರು ಸಕ್ರಿಯವಾಗಿ ಕೋಳಿಅಂಕದಲ್ಲಿ ಭಾಗವಹಿಸುತ್ತಾರೆ. ಇವರಲ್ಲಿ ಕೋಳಿ ಕಾಳಗಕ್ಕೆ ಬಿಡುವವರು, ಬಾಳು ಕಟ್ಟುವವರು, ಕೋಳಿಗಳನ್ನು ಕ್ರಮಬದ್ಧವಾಗಿ ಸಾಕುವವರು ತುಂಬಾ ಜನರಿದ್ದಾರೆ.

3.3: ಸಾಂಸ್ಕೃತಿಕ ಸಂದರ್ಭ: ಜಿಲ್ಲೆಯ ಸಾಂಸ್ಕೃತಿಕ ಲೋಕದ ಎರಡನ್ನು ಮುಖ್ಯವಾಗಿ ಗುರುತಿಸಬಹುದು. (1) ಯಕ್ಷಗಾನ, (2) ಭೂತಾರಾಧನೆ.

ಯಕ್ಷಗಾನವನ್ನು ಕರಾವಳಿಯ ಕಲೆ ಎಂದೇ ಕರೆಯುವುದು ವಾಡಿಕೆಯಾಗಿದೆ. ಯಕ್ಷಗಾನ ಆಡುವ ಮತ್ತು ನೋಡುವ ಜನ ಹೆಚ್ಚಿರುವುದರಿಂದಾಗಿ ಇದು ಜೀವಂತ ಕಲೆಯಾಗಿ ಇಂದಿಗೂ ಉಳಿದಿದೆ. ದಕ್ಷಿಣ ಕನ್ನಡ ಮಾತ್ರವಲ್ಲದೆ ಇತರ ಪ್ರದೇಶ ಮತ್ತು

ಹೊರದೇಶಗಳಲ್ಲೂ ಇಂದು ಈ ಕಲೆ ಹೆಸರು ಗಳಿಸುತ್ತಿದೆ. ಯಕ್ಷಗಾನವನ್ನು ಹಲವು ರಾತ್ರಿಗಳ ತನಕ ನಿದ್ರೆ ಬಿಟ್ಟು ನೋಡುವ ಅತಿ ಆಸಕ್ತ ಜನ ಈ ಜಿಲ್ಲೆಯಲ್ಲಿದ್ದಾರೆ.

ಯಕ್ಷಗಾನ ವರ್ಷದ ಹನ್ನೆರಡು ತಿಂಗಳು ನಡೆಯುವ ಆಟವಲ್ಲ. ಮಳೆ ಇಲ್ಲದ ಆರು ತಿಂಗಳು ನಡೆಯುತ್ತದೆ. ಆ ಸಮಯದಲ್ಲಿ ಕೃಷಿ ಕೆಲಸ ಮುಗಿದಿರುವುದರಿಂದ ಜನ ಯಕ್ಷಗಾನವನ್ನು ನೋಡುತ್ತಾರೆ. ಹಿಂದೆ ಶುದ್ಧ ಮನರಂಜನೆಗೆಂದೇ ಆರಂಭವಾದ ಈ ಕಲೆ ಈಗ ವ್ಯಾಪಾರವಾಗಿದೆ. ಯಜಮಾನರುಗಳು ಹಣ ಮಾಡುವ ದೃಷ್ಟಿಯಿಂದಲೇ ಆಟ ಆಡಿಸುವುದೂ ಇದೆ. ದೇವಾಲಯಗಳು ಯಕ್ಷಗಾನ ಮೇಳಗಳನ್ನು ರಚಿಸಿ ಜನರಿಗೆ ಮನರಂಜನೆಯನ್ನು ಒದಗಿಸಿ ಕೊಡುತ್ತಿತ್ತು. ಆದರೆ ಈಗ್ಗ ಹಣ ಇದ್ದ ವ್ಯಕ್ತಿ ಮೇಳ ರಚಿಸಬಹುದು. ಯಕ್ಷಗಾನ ಹಿಂದಿನ ಕಾಲದಲ್ಲಿ ದೊಂದಿ, ಪೆಟ್ರೋಮೆಕ್ಸ್‌ಗಳ ಬೆಳಕಿನಲ್ಲಿ ನಡೆಯುತ್ತಿತ್ತು. ಆದರೆ ಈಗ ಆಧುನಿಕ ಸಲಕರಣೆಗಳನ್ನು ಉಪಯೋಗಿಸಿ ರಂಗಸ್ಥಳ, ವೇಷಭೂಷಣ, ಬೆಳಕುಗಳಿಂದ ಯಕ್ಷಗಾನ ಹೊಸ ಮೆರುಗನ್ನು ಪಡೆಯುತ್ತಿದೆ. ಜನ ಬೆಳೆಸುತ್ತಿದ್ದಾರೆ.

ಯಕ್ಷಗಾನ ತುಳುಜನರ ಮನರಂಜನಾ ಕಲೆಯಾದರೆ ಭೂತಾರಾಧನೆ ಆರಾಧನಾ ಕಲೆ. ತುಳುವರು ಭೂತವನ್ನು ನಂಬಿ ತಮ್ಮ ಕಾರ್ಯಗಳಿಗೆ ನಡೆಯುತ್ತಾರೆ. ಭೂತ ನಂಬಿದವರನ್ನು ರಕ್ಷಿಸುತ್ತದೆ ಎಂಬುದು ತಿಳಿದಿದ್ದಾರೆ. ಇದರಿಂದಾಗಿ ವರ್ಷದಲ್ಲಿ ಒಂದು ಬಾರಿ ಭೂತಕ್ಕೆ ಉತ್ಸವ, ನೇಮವನ್ನು ವಿಜೃಂಭಣೆಯಿಂದ ನೀಡುತ್ತಾರೆ. ತಿಂಗಳಿಗೊಂದು ಬಾರಿ ಸಂಕ್ರಮಣ ದಿನಗಳಲ್ಲಿ ಭೂತಸ್ಥಾನದ ಹತ್ತಿರ ಎಳನೀರು ಹೂಗಳಿಂದ ಪೂಜಿಸುತ್ತಾರೆ.

ಭೂತ ಎಂದರೆ ತುಳುವರು ನಂಬುವಂತೆ ದೇವರ ಗಣಗಳು. ಒಂದನೆ ಸ್ಥಾನದಲ್ಲಿ ದೇವರಿದ್ದರೆ ಭೂತಗಳು ಎರಡನೆಯ ವರ್ಗದವುಗಳು. ದೇವರಿಂದ ಹತ್ತಿರದ ಸಂಬಂಧಿಗಳು ಇವು ಎಂದು ತುಳುವರು ತಿಳಿಯುತ್ತಾರೆ. ಜನರು ಉತ್ಸವದ ಸಂದರ್ಭದಲ್ಲಿ

ಭೂತಗಳ ಜೊತೆಗೆ ಸಂಭಾಷಣೆ ಮಾಡುವ ಮೂಲಕ ತಮ್ಮ ಸುಖ ದು:ಖಗಳನ್ನು ಹೇಳಿ ಪರಿಹಾರ ಕಂಡುಕೊಳ್ಳುತ್ತಾರೆ. ಈ ಕಾರಣದಿಂದ ತುಳುವರ ಜೀವಸತ್ವ ಇರುವ ಕಲೆ ಇದಾಗಿದೆ.

ಮೇಲಿನ ಎರಡೂ ಸಂದರ್ಭಗಳು ಕೋಳಿಅಂಕವನ್ನು ಜನಪ್ರಿಯಗೊಳಿಸಿವೆ.

<u>3.4: ಧಾರ್ಮಿಕ ಸಂದರ್ಭ</u>: ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಲವು ಧರ್ಮಗಳ ಜನರು ಇರುವುದರಿಂದಾಗಿ ಅವರ ಪೂಜೆಯ ವಿಧಾನಗಳು ಬೇರೆ ಬೇರೆಯಾಗಿವೆ. ಹಿಂದುಗಳು ದೇವಾಲಯಗಳಲ್ಲಿ ಪೂಜೆ ಸಲ್ಲಿಸಿದರೆ, ಮುಸ್ಲಿಮರು ದರ್ಗಾಗಳಲ್ಲಿ ಪೂಜಿಸುತ್ತಾರೆ. ಜೈನರು ಜಿನಾಲಯಗಳಲ್ಲಿ ಪೂಜೆ ಸಲ್ಲಿಸಿದರೆ, ಕ್ರಿಶ್ಚಿಯನ್ನರು ಇಗರ್ಜಿಗಳಲ್ಲಿ ಪೂಜೆ ಮಾಡುತ್ತಾರೆ. ತಮ್ಮ ಧರ್ಮಗಳಿಗೆ ಅನುಗುಣವಾಗಿ ಆಯಾಯ ಜನಾಂಗದಲ್ಲಿ ದೇವರ ಕಲ್ಪನೆಗಳು ಇರುವುದು ಸಾಮಾನ್ಯ. ತಮ್ಮ ಮನಸ್ಸಿಗೆ ಒಪ್ಪುವಂತೆ ದೇವರನ್ನು ಆರಾಧಿಸಿಕೊಂಡು ಜನ ಬಂದಿರುವುದನ್ನು ಕಾಣಬಹುದು.

ಹಿಂದು ಧರ್ಮಿಯರು ದೇವಾಲಯದಲ್ಲಿ ಜಾತ್ರೆ, ದೈವದ ಕೋಲ, ಕಂಬಳಗಳು ನಡೆದ ಬಳಿಕ ಅಲ್ಲಿ ಸಾಮಾನ್ಯವಾಗಿ ಕೋಳಿಅಂಕಗಳನ್ನು ನಡೆಸುತ್ತಾರೆ. ದೇವರ ಹೆಸರಲ್ಲಿ ನಡೆಯುವ ಈ ಕೋಳಿಅಂಕಕ್ಕೆ ಧಾರ್ಮಿಕ ಆಯಾಮವನ್ನು ಕಲ್ಪಿಸಿ ಕಾನೂನಿನ ರಕ್ಷಣೆಯನ್ನು ಪಡೆಯುತ್ತಿರುವುದು ಗಮನಿಸತಕ್ಕ ಅಂಶ.

ಹಿಂದು ಧರ್ಮದ ದೇವಾಲಯಗಳ ಉತ್ಸವ ಜಾತ್ರೆಗಳು ನಡೆದ ನಂತರ ನಡೆಯುವಷ್ಟು ಕೋಳಿಅಂಕಗಳು ಉಳಿದ ಧಾರ್ಮಿಕ ಸಂದರ್ಭದಲ್ಲಿ ಕಾಣಲು ಸಾಧ್ಯವಿಲ್ಲ. ಆದರೆ ಇತರ ಧರ್ಮಿಯರು ಇದರಲ್ಲಿ ಪಾಲ್ಗೊಳ್ಳಬಾರದೆಂಬ ನಿಯಮವಿಲ್ಲ. ದೇವಾಲಯಗಳಿಗೆ ಹೋಗದೆ ಕೇವಲ ಕೋಳಿಅಂಕಕ್ಕಾಗಿಯೇ ಬರುವವರು ಇದ್ದಾರೆ. ಕೋಳಿಅಂಕದಲ್ಲಿ ಆಸಕ್ತಿ ಇರುವವರು ಮತ್ತು ಮಾಂಸಾಹಾರಿಗಳು ಮಾತ್ರ ಹೆಚ್ಚು ಭಾಗವಹಿಸುವುದನ್ನು ಕಾಣಬಹುದು.

3.5: ಆರ್ಥಿಕ ಸಂದರ್ಭ: ಕೃಷಿಯನ್ನು ಪ್ರಧಾನವಾಗಿರಿಸಿಕೊಂಡ ಈ ಜಿಲ್ಲೆಗಳ ಜನಗಳು ಕೃಷಿಯನ್ನು ಅವಲಂಬಿಸಿಯೇ ಜೀವನ ನಡೆಸುತ್ತಾರೆ.

ಇಲ್ಲಿ ಪ್ರಧಾನವಾಗಿ ಭತ್ತವನ್ನು ಬೆಳೆಸುತ್ತಾರೆ. ಇದನ್ನು ಆಹಾರಕ್ಕಾಗಿ ಉಪಯೋಗಿಸುತ್ತಾರೆ. ಅಡಿಕೆ, ತೆಂಗು, ಗೇರು ಬೀಜ, ಕೊಕ್ಕೊ, ರಬ್ಬರ್, ಕಾಫಿ ಬಾಳೆ, ಕಬ್ಬು, ನೆಲಕಡಲೆಗಳನ್ನು ವಾಣಿಜ್ಯ ಬೆಳೆಗಳಾಗಿಯೇ ಬೆಳೆಯುತ್ತಾರೆ. ಇವುಗಳ ಮಾರಾಟದಿಂದ ಹಣ ಗಳಿಸಿ ಜೀವನ ಸಾಗಿಸುತ್ತಾರೆ. ಹಣ್ಣು ಹಂಪಲುಗಳಾದ ಬಾಳೆ, ಹಲಸು, ಅನಾನಸು, ತರಕಾರಿಗಳು, ಬೀಜಗಳಾದ ಉದ್ದು, ಹೆಸರು, ಹುರುಳಿಗಳನ್ನು ತಮ್ಮ ಉಪಯೋಗಕ್ಕಾಗಿ ಬೆಳೆಸುತ್ತಾರೆ. ಕಾಸರಗೋಡಿನ ಕೆಲವು ಭಾಗಗಳಲ್ಲಿ ಗೆಣಸು, ಮರಗೆಣಸು, ರಾಗಿ ಮುಂತಾದ ಬೆಳೆಗಳನ್ನು ಬೆಳೆಸುತ್ತಾರೆ. ತಮಗೆ ಅಗತ್ಯಕ್ಕಿಂತ ಹೆಚ್ಚು ಬೆಳೆ ಬಂದರೆ ಅವುಗಳನ್ನು ಮಾರಾಟ ಮಾಡಿ ಹಣ ಗಳಿಸುತ್ತಾರೆ.

ಕೃಷಿಕರು ಸಾಮಾನ್ಯವಾಗಿ ಬೇಸಾಯ ಕೆಲಸಗಳು ಮುಗಿದು ಫಸಲು ಬರುವವರೆಗೆ ಅದಕ್ಕೆ ನೀರುಗೊಬ್ಬರಗಳನ್ನು ಪೂರೈಸಿ ಉಳಿದ ಸಮಯವನ್ನು ಮನರಂಜನೆಗಾಗಿ ವಿನಿಯೋಗಿಸುತ್ತಾರೆ. ಆ ಕಾರಣದಿಂದ ತಾವು ಮನೆಯಲ್ಲಿ ಕಾಳಗಕ್ಕಾಗಿಯೇ ಸಾಕಿದ ಕೋಳಿಗಳನ್ನು ಉಪಯೋಗಿಸಿಕೊಂಡು ತಮ್ಮ ಸಾಮರ್ಥ್ಯವನ್ನು ಪ್ರದರ್ಶಿಸುತ್ತಾರೆ. ಕೋಳಿಅಂಕದಲ್ಲಿ ಈಚಿನ ದಿನಗಳಲ್ಲಿ ಜೂಜಿನ ಮೊತ್ತ ಬಹಳಷ್ಟು ಹೆಚ್ಚುತ್ತಿರುವುದನ್ನು ಕಾಣಬಹುದು. ಕೃಷಕರು ತಾವು ಬೆಳೆಸಿದ ಕೃಷಿ ಉತ್ಪತ್ತಿಯಲ್ಲಿ ಗಳಿಸಿದ ಹೆಚ್ಚಿನ ಹಣವನ್ನು ಈ ರೀತಿ ಅಂಕಗಳಿಗೆ ಉಪಯೋಗಿಸುತ್ತಿರುವುದು ಇದಕ್ಕೆ ಕಾರಣ.

ಕಾಲ: ಕೋಳಿಅಂಕವನ್ನು ಜನ ತಮ್ಮ ವಿಶ್ರಾಂತಿಯ ಕಾಲದಲ್ಲಿ ನಡೆಸುತ್ತಾರೆ. ನವಂಬರ್ ತಿಂಗಳಿನ ಸಮಯಕ್ಕೆ ಮಳೆ ನಿಲ್ಲುತ್ತದೆ. ಆಗ ಜನರ ಕೃಷಿಯ ಒಂದು ಭಾಗ ಮುಗಿದಿರುತ್ತದೆ. ನವಂಬರ ತಿಂಗಳಿನಿಂದ ದೇವಾಲಯಗಳ ಜಾತ್ರೆಗಳು ಆರಂಭವಾಗುತ್ತವೆ. ಆಗ ಕೋಳಿಅಂಕಕ್ಕೆ ಸರಿಯಾದ ಕಾಲ. ನವಂಬರ್ ತಿಂಗಳಲ್ಲಿ ಆರಂಭವಾಗುವ ಕೋಳಿಅಂಕ ಜುಲೈ ತಿಂಗಳಿನ ತನಕವೂ ನಡೆಯುತ್ತದೆ. ಮಳೆ ಬರುವಾಗ ಮಾತ್ರ ಕೋಳಿ ಅಂಕ ನಡೆಸುವುದಿಲ್ಲ. ಶರಾಬು ಅಂಗಡಿಗಳು ಕೋಳಿಅಂಕ ಆರಂಭಿಸಿದ ನಂತರ

ಕೋಳಿ ಅಂಕಕ್ಕೆ ವಾರ, ತಿಂಗಳು ಎಂಬುದಿಲ್ಲ. ತಮಗೆ ಇಷ್ಟ ಬಂದಾಗ ಕೋಳಿ ಅಂಕಗಳನ್ನು ನಡೆಸುತ್ತಾರೆ.

ಒಂದೊಂದು ಪ್ರದೇಶದಲ್ಲಿ ವಾರದ ಒಂದೊಂದು ದಿನಗಳಲ್ಲಿ ಕೋಳಿಅಂಕಗಳು ನಡೆಯುತ್ತವೆ. ಇದನ್ನು ವಾರದ ಅಂಕಗಳೆಂದು ಕರೆಯುತ್ತಾರೆ. ಇದು ಶರಾಬು ಅಂಗಡಿಯ ಬಳಿಯಲ್ಲಿ ಸಂಜೆಯ ಹೊತ್ತಿನಲ್ಲಿ ನಡೆಯುತ್ತದೆ.

ಅಧ್ಯಾಯ ನಾಲ್ಕು

---

## 4. ಕೋಳಿಅಂಕದ ವಿವರಣೆ

4.1: ಕೋಳಿಅಂಕದ ಸಾಮಾನ್ಯ ನಿರೂಪಣೆ

4.2: ಕೋಳಿಅಂಕದ ಬಗೆಗೆ
ಇತರ ಮಾಹಿತಿಗಳು

## 4.1:ಕೋಳಿಅಂಕದ ಸಾಮಾನ್ಯ ನಿರೂಪಣೆ

'ಕೋಳಿಅಂಕ' ಎಂದಾಗ ಕೋಳಿಗಳೆರಡರ ಕಾಳಗ ಮಾತ್ರ ಕಣ್ಣೆದುರಿಗೆ ಬಂದು ನಿಲ್ಲುತ್ತದೆ. ಆದರೆ ಆಳಕ್ಕಿಳಿದಂತೆ ಅವುಗಳಲ್ಲಿರುವ ಬೇರೆ ಬೇರೆ ಹಂತಗಳು ಗೋಚರವಾಗುತ್ತವೆ. ಅವುಗಳನ್ನು ಈ ಕೆಳಗಿನಂತೆ ಗಮನಿಸಲಾಗಿದೆ.

<u>4.1.1:ಕೋರಿಗೂಂಟ</u>: 'ಕೋರಿಗೂಂಟ' ಎಂದರೆ ಕೋಳಿಗೂಟ ಎಂದು ಅರ್ಥ. ದೇವಾಲಯಗಳ ಜಾತ್ರೆಯ, ಭೂತಾರಾಧನೆಯ, ಕಂಬಳದ ಇವುಗಳ ಸಂಬಂಧ ವಾಗಿ ಆವರಣದಿಂದ ಹೊರಗಡೆ ನಡೆಯುವ ಕೋಳಿಅಂಕದ ಪ್ರಾರಂಭದ ವಿಧಿಯಾಗಿ ಕೋಳಿಗೂಟ (ಕೋರಿಗೂಂಟ) ದ ವಿಧಿಯು ಜರಗುತ್ತದೆ. ಭೂತಾರಾಧನೆಯ ಆಚರಣಾತ್ಮಕ ಉತ್ಸವಕ್ಕಿಂತ ಕೆಲವು ದಿನಗಳ ಮೊದಲು ಅಥವಾ ಅನಂತರದ ಕೆಲವು ದಿನಗಳಲ್ಲಿ ಕೋಳಿಅಂಕ 'ನಡೆಯುತ್ತದೆ.

ಉತ್ಸವಕ್ಕಿಂತ ಮೊದಲು ಅಥವಾ ನಂತರ ಮುಹೂರ್ತ ನೋಡಿ ಆ ದಿನ ಬೆಳಿಗ್ಗೆ ಗುಡಿಯ ಬಳಿಗೆ ಊರಿನ ಗುರಿಕಾರ, ಮಾನಿ, ಸಂಬಂಧಿಸಿ ಇತರರು ಬರುತ್ತಾರೆ. ಊರಿನ ಗುರಿಕಾರ ಮತ್ತು ಪಕ್ಕದ ಊರಿನ ಗುರಿಕಾರ ಎರಡು ಕೋಳಿಗಳನ್ನು ಹಿಡಿದುಕೊಂಡು ಬರುತ್ತಿದ್ದುದು ವಾಡಿಕೆಯಾಗಿತ್ತು. ಬರುವಾಗ ಪ್ರದೇಶದ ಆಚರಣೆಗೆ ಅನುಗುಣವಾಗಿ 5, 7, 9, ಮರದಿಂದ ತಯಾರಿಸಿದ ಗೂಟಗಳನ್ನು ತರುತ್ತಾರೆ. ಗೂಟಗಳು ಒಂದರಿಂದ ಒಂದುವರೆ ಅಂಗುಲ ಉದ್ದ ಇರುತ್ತದೆ. ಗುರಿಕಾರನ ಜೊತೆ ವಾಲಗದವರು ಸುಡುಮದ್ದು ಸುಡುವವರು ಇರುತ್ತಾರೆ. ಕೋಳಿಗೂಟದ 'ವಿಧಿಯು ಬಹಳ ವಿಜೃಂಭಣೆಯಿಂದ ನಡೆಯುತ್ತಿದ್ದುದರಿಂದ ಈ ವಿಧಿಯಲ್ಲಿ ತುಂಬಾ ಜನ ಪಾಲ್ಗೊಳ್ಳುತ್ತಾರೆ. ಹೀಗೆ ಬಂದ ಗುರಿಕಾರರು ಗುಡಿಯ ಪಕ್ಕ ಇರುವ ಗದ್ದೆ ಅಥವಾ ಮೈದಾನಕ್ಕೆ ಬಂದು ನಿಲ್ಲುತ್ತಾರೆ. ತಾವು ತಂದ ಗೂಟಗಳನ್ನು ನೆಲದಲ್ಲಿ ನೆಡುತ್ತಾರೆ. (ನೋಡಿ: ಚಿತ್ರಸಂಖ್ಯೆ.2)

ಈ ರೀತಿ ಚೌಕಾಕಾರದಲ್ಲಿ ಗೂಟಗಳನ್ನು ನೆಟ್ಟು ಅವುಗಳನ್ನು ಜೋಡಿಸುವಂತೆ ಚೌಕಾಕಾರದಲ್ಲಿ ಗೆರೆ ಎಳೆಯುತ್ತಾರೆ. ಆ ನಂತರ ಚೌಕಾಕಾರದ ಒಳಗೂ ಮೂಲೆ

ಗಳನ್ನು ಸೇರಿಸುವಂತೆ ಅಡ್ಡಗೆರೆಯನ್ನು ಎಳೆಯುತ್ತಾರೆ. ಈ ಗೂಟಗಳಿಗೆ ಒಂದೊಂದು ಕೋಳಿಯನ್ನು ಹಗ್ಗದಿಂದ ಸುತ್ತಿಕೊಂಡು ಹೋಗುತ್ತಾರೆ. ಆಮೇಲೆ ಆ ಕೋಳಿಗಳನ್ನು ಮೂರು ಸಲ ಎದುರೆದುರಾಗಿ ಮುಟ್ಟಿಸುತ್ತಾರೆ. ಆಮೇಲೆ ಆ ಕೋಳಿಗಳನ್ನು ಮನೆಗೆ ಕೊಂಡು ಹೋಗುತ್ತಾರೆ. ಇದು ಕೋಳಿ ಗೂಟದ ವಿಧಿಯಾಗಿದೆ.

ಎಷ್ಟು ಗೂಟಗಳನ್ನು ಹಾಕುತ್ತಾರೆ ಎಂಬುದರಿಂದ ಎಷ್ಟು ದಿನ ಕೋಳಿ ಅಂಕ ನಡೆಯುತ್ತದೆ ಎಂಬುದನ್ನು ಕೂಡಾ ನಿರ್ಧರಿಸಲಾಗುತ್ತದೆ. ಒಂದು ದಿನದ ಕೋಳಿ ಅಂಕವಾದರೆ ಒಂದು ಗೂಟ ಹಾಕುವ ಕ್ರಮವು ಇದೆಯಂತೆ. ಕೋಳಿ ಅಂಕ ಕಳೆದಂತೆ ಒಂದೊಂದೆ ಗೂಟವನ್ನು ಕಿತ್ತು ತೆಗೆಯುತ್ತಾರೆ. ಪ್ರದೇಶಗಳಿಗೆ ಅನುಗುಣವಾಗಿ ಗೂಟದ ಕ್ರಮ ಮತ್ತು ಹಾಕುವ ಗೂಟಗಳು ಬದಲಾಗುತ್ತಿರುತ್ತದೆ.

### 4.1.2: 'ಕಲ' ಹಿಡಿಯುವುದು, 'ಪತಿ' ಮಾಡುವುದು ಮತ್ತು ಜೂಜು:

ಕೋಳಿಅಂಕ ನಡೆಯುವ ಸ್ಥಳಕ್ಕೆ ಜನ ತಮ್ಮ ತಮ್ಮ ಕೋಳಿಗಳೊಂದಿಗೆ ಬರುತ್ತಾರೆ. ಹೀಗೆ ಬಂದ ಜನರು ಕೋಳಿಗಳನ್ನು ಹಿಡಿದುಕೊಂಡು ವೃತ್ತಾಕಾರ ದಲ್ಲಿ ಕುಳಿತುಕೊಳ್ಳುತ್ತಾರೆ. ಇದನ್ನು 'ಕಲ' ಹಿಡಿಯುವುದು (ಕಲಪತ್ತುನೆ) ಎಂದು ಕರೆಯುತ್ತಾರೆ. (ನೋಡಿ: ಚಿತ್ರ ಸಂಖ್ಯೆ.3)

'ಕಲ' ಹಿಡಿದ ಮೇಲೆ 'ಪತಿ' ಮಾಡು ಅಥವಾ ಪತ್ತಿ ಮಾಡುವ ಕೆಲಸ ನಡೆಯುತ್ತದೆ. ಪತಿ ಮಾಡುವುದೆಂದರೆ ಜೊತೆ ಮಾಡುವುದು ಎಂದು ಅರ್ಥ. ಪತಿ ಮಾಡುವಾಗ ಕೋಳಿಗಳ ಜಾತಿ, ಭಾರ, ಎತ್ತರ, ಧೈರ್ಯ, ವಯಸ್ಸುಗಳನ್ನು ಪರಿಗಣಿಸಿ ಜೊತೆ ಮಾಡುತ್ತಾರೆ. ಇಂತಹ ಕೋಳಿಗಳನ್ನೇ ಪತಿ ಮಾಡಬೇಕೆಂಬ ನಿಯಮವಿಲ್ಲ. ಕೋಳಿಗಳ ಯಜಮಾನರುಗಳಿಗೆ ತೃಪ್ತಿಯಾದ ಯಾವ ಕೋಳಿಗಳನ್ನು ಕಾಳಗವಾಡಿಸಬಹುದು. ಪತಿ ಮಾಡುವ ಸಂದರ್ಭದಲ್ಲಿ ಜೂಜಿನ ಬಗೆಗೆ ಯಜಮಾನರುಗಳ ಮಧ್ಯೆ ಮಾತುಕತೆಗಳಾಗುತ್ತದೆ. ಇಬ್ಬರು ಕಟ್ಟುವ ಜೂಜು ಒಂದೇ ರೀತಿಯಲ್ಲಿ

ಬಂದರೆ ಮಾತ್ರ ಕೋಳಿಗಳ ಕಾಳಗಕ್ಕೆ ಒಪ್ಪುತ್ತಾರೆ. ಜೂಜು ಕಟ್ಟುವ ಮಾತು ಕತೆಯಲ್ಲಿ ಯಜಮಾನರುಗಳ ಮಧ್ಯೆ ಚರ್ಚೆಯಾಗಿ ಸರಿ ಬಾರದಿದ್ದರೆ ಪತಿ (ಜೊತೆ) ಕಡಿದು ಬೀಳುವುದು.

ಕಾಳಗಕ್ಕೆ ಇಬ್ಬರು ಯಜಮಾನರುಗಳು ಒಪ್ಪಿಗೆ ಸೂಚಿಸಿದರೆ 'ದೇಪರ್ಣೆ' ಎಂಬ ಕ್ರಿಯೆ ನಡೆಸುತ್ತಾರೆ. 'ದೇಪರ್ಣೆ' ಎಂದರೆ ಒಪ್ಪಿಗೆ ಸೂಚಿಸಿದ್ದೇವೆ ಎಂದು ಹೇಳಿ ಕೋಳಿಗಳನ್ನು ಎತ್ತುವುದು. ಇದು ಒಪ್ಪಿಗೆಯನ್ನು ಸಾಬೀತು ಪಡಿಸಲು ನಡೆಸುವ ಕ್ರಿಯೆ.

<u>4.1.3: 'ಬಾಳ್' ಕಟ್ಟುವುದು</u>: ಕೋಳಿಗಳನ್ನು ಒಪ್ಪಿಗೆ ಸೂಚಿಸಿ ಕಾಳಗಕ್ಕೆ ಎತ್ತಿದ ಮೇಲೆ "ಬಾಳ್" ಕಟ್ಟುತ್ತಾರೆ. 'ಬಾಳ್' ಎಂದರೆ ಕೋಳಿಯ ಕಾಲಿಗೆ ಕಟ್ಟುವ ಉಕ್ಕಿನಿಂದ ತಯಾರಿಸಿದ ಸಣ್ಣ ಕತ್ತಿ. ( ನೋಡಿ: 'ಬಾಳ್' ಗಳ ವಿಧಗಳಿಗೆ ಚಿತ್ರ ಸಂಖ್ಯೆ.4)

ಎರಡೂ ಕಡೆಯವರು ಕೋಳಿಗಳಿಗೆ ಬಾಳು ಕಟ್ಟುವವರನ್ನು ನಿಗದಿ ಪಡಿಸುತ್ತಾರೆ. ಇಂತಹವರೇ ಬಾಳು ಕಟ್ಟಿದರೆ ಕೋಳಿ ಗೆಲ್ಲುವುದೆಂದು ನಂಬಿಕೆಯೂ ಇದೆ. ಬಾಳುಗಳು ಒಂದುವರೆ ಇಂಚಿನಿಂದ ನಾಲ್ಕು ಇಂಚುಗಳಷ್ಟು ಉದ್ದವಿರುತ್ತದೆ. ಕೋಳಿಗಳಿಗೆ ಅನುಗುಣವಾಗಿ ಬಾಳುಗಳನ್ನು ಕಟ್ಟುತ್ತಾರೆ. ಕೋಳಿಅಂಕಕ್ಕೆ ಬಂದವರು ಎಲ್ಲರೂ ಕೋಳಿಗೆ ಬಾಳು ಕಟ್ಟುವವರು, ಕೋಳಿ ಬಿಡುವವರು ಆಗಿರುವುದಿಲ್ಲ. ಕೆಲವರು ಅನುಭವಿಗಳಾಗಿರುತ್ತಾರೆ. ಇದರಿಂದಾಗಿ ಕೋಳಿಯ ಯಜಮಾನರುಗಳು ಕೋಳಿಗಳನ್ನು ನುರಿತವರಲ್ಲಿ ಕೊಟ್ಟು ಬಾಳು ಕಟ್ಟಿಸಿ ಕಾಳಗ ಮಾಡಿಸುತ್ತಾರೆ.

ಬಾಳುಗಳು ಕೂಡ ಎಲ್ಲರಲ್ಲೂ ಇರಬೇಕೆಂದಿಲ್ಲ. ಕೆಲವರಲ್ಲಿ ಬಾಳುಗಳಿರುತ್ತದೆ. ಕೋಳಿಯ ಯಜಮಾನ ಅವರಿಂದ ಬಾಳನ್ನು ಪಡೆಯುತ್ತಾನೆ. ಅಂಕ ಮುಗಿದ ಮೇಲೆ ಬಾಳನ್ನು ಹಿಂತಿರುಗಿಸುವಾಗ ಅದಕ್ಕೆ ತಗಲುವ ಸುಂಕವನ್ನು ಕೊಡಬೇಕು. ಅದೇ ರೀತಿ ಬಾಳು ಕಟ್ಟುವವನಿಗೆ, ಕೋಳಿಯನ್ನು ಕಾಳಗಕ್ಕೆ ಬಿಡುವವ

ನಿಗೂ ಸುಂಕ ಕೊಡಬೇಕು. ಕಾಳಗದಲ್ಲಿ ಕೋಳಿ ಗೆದ್ದರೆ ಮಾತ್ರ ಸುಂಕ ಕೊಡುವುದು ರೂಢಿ.

<u>4.1.4: ಆರೈಕೆ</u>: ಕೋಳಿಅಂಕದ ಸಂದರ್ಭದಲ್ಲಿ ಕೋಳಿಗಳಿಗೆ ಬಾಳು ಕಟ್ಟುವವರು, ಕೋಳಿ ಬಿಡುವವರು ಇರುವಂತೆಯೇ ಕೋಳಿಗಳಿಗೆ ನೀರು ಹಿಡಿಯುವವರು, ಗಾಳಿ ಹಾಕುವವರು ಎಂದಿರುತ್ತಾರೆ. ಕೋಳಿಗಳು ಕಾಳಗ ನಡೆಸುತ್ತಿದ್ದಂತೆ ಕೋಳಿಗಳಿಗೆ ಗಾಯವಾದರೆ ಅದನ್ನು ಕಾಳಗದಿಂದ ಹೊರತೆಗೆದು ಅವುಗಳಿಗೆ ಆರೈಕೆ ಮಾಡುತ್ತಾರೆ. ಮದ್ದು ಹಚ್ಚುತ್ತಾರೆ, ನೀರು ಕುಡಿಸುತ್ತಾರೆ. ಕುಂಡೆಗೆ ನೀರು ಹಿಡಿಯುತ್ತಾರೆ, ಗಾಳಿ ಹಾಕುತ್ತಾರೆ. ಹೀಗೆ ಆರೈಕೆ ಮಾಡುವುದಕ್ಕಾಗಿಯೇ ಜನ ಇರುತ್ತಾರೆ. ಇವರಿಗೆ ಅಂಕದ ಕೊನೆಯಲ್ಲಿ ಸುಂಕ ಕೊಡುತ್ತಾರೆ. ಹಿಂದಿನ ಕಾಲದಲ್ಲಿ ಆರೈಕೆ ಮಾಡುವುದಕ್ಕೆ ತುಂಬಾ ಸಮಯ ಹಿಡಿಯುತ್ತಿತ್ತು. ಆದರೆ ಈಗ ಪೋಲೀಸಿನವರ ಭಯದಿಂದ ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಕಾಳಗ ಮುಗಿಸುವ ಉದ್ದೇಶದಿಂದ ಆರೈಕೆ ಮಾಡುವುದಕ್ಕೆ ಪತಿ ಮಾಡುವ ಸಂದರ್ಭದಲ್ಲಿಯೇ ನಿಯಮಗಳನ್ನು ಮಾಡಿಕೊಂಡಿರುತ್ತಾರೆ. (ಚಿತ್ರ ಸಂಖ್ಯೆ.5 ನೋಡಿ)

<u>4.1.5: ಸೋಲು – ಗೆಲುವು</u>: ಕೋಳಿ ಅಂಕದ ಕೊನೆಯ ಭಾಗವೆಂದರೆ ಸೋಲು ಗೆಲುವು ನಿರ್ಣಯ. ಕಾಳಗದಲ್ಲಿ ಸೋತ ಅಥವಾ ಸತ್ತ ಕೋಳಿಯನ್ನು ''ಒಟ್ಟೆ'' ಎಂದು ಕರೆಯುತ್ತಾರೆ. 'ಒಟ್ಟೆ' ಎಂದರೆ 'ತೂತು' ರಂಧ್ರ ಎಂದು ಅರ್ಥ. ಕಾಳಗದಲ್ಲಿ ಗಾಯವಾಗಿ ರಕ್ತ ಹೋಗಿ ಸತ್ತಿರುವುದರಿಂದ ಇದನ್ನು 'ಒಟ್ಟೆ' ಎಂದು ಕರೆದಿರಬಹುದು. ಗೆದ್ದ ಕೋಳಿಯನ್ನು 'ಬಂಟ' ಎಂದು ಕರೆಯುತ್ತಾರೆ. 'ಬಂಟ' ಎಂದರೆ ಯೋಧ, ಶೂರ ಎಂಬ ಅರ್ಥಗಳಿರುವುದರಿಂದ ಗೆದ್ದ ಕೋಳಿಯನ್ನು 'ಬಂಟ' ಎಂದು ಕರೆದಿರಬಹುದು.

ಕೋಳಿಅಂಕ ನಿಗದಿತ ಸ್ಥಳದಲ್ಲಿ ನಡೆಯುವುದು. ಕಾಳಗದಲ್ಲಿ ಕೋಳಿ ನಿಗದಿತ ಸ್ಥಳ ಬಿಟ್ಟು ಓಡಿದರೆ, ಆ ಕೋಳಿ ಸೋತಿತು ಎಂದು ಅರ್ಥ. ಒಂದು ವೇಳೆ ಎರಡೂ ಕೋಳಿಗಳು ಕಾಳಗದಲ್ಲಿ ಸತ್ತರೆ ಕೋಳಿಗಳು ಮತ್ತು ಜೂಜು ಯಜಮಾನರು



ಕೋಳಿಗರಾಟದ ಕ್ರಮ (ಚಿತ್ರಸಂಖ್ಯೆ:2)



ಕಲ ಹಿಡಿಯುವುದು. (ಚಿತ್ರಸಂಖ್ಯೆ:3)



ವಿವಿಧ ರೀತಿಯ ಬಾಳುಗಳು ( ಚಿತ್ರ ಸಂಖ್ಯೆ:4)



ಕೋಳಿಯನ್ನು ಆರೈಕೆ ಮಾಡುತ್ತಿರುವುದು (ಚಿತ್ರ ಸಂಖ್ಯೆ:5).

ಗಳಿಗೆ ಸೇರುತ್ತವೆ. ಆಗ ಅಲ್ಲಿ ಸೋಲು–ಗೆಲುವಿನ ತೀರ್ಮಾನ ಆಗಿಲ್ಲವೆಂದು ಅರ್ಥ. ಈ ರೀತಿಯ ನಿಯಮಗಳು ಜಾಗದಿಂದ ಜಾಗಕ್ಕೆ ಬದಲಾಗುತ್ತಾ ಹೋಗುತ್ತದೆ. ನಿಯಮಗಳನ್ನು ಆ ಊರಿನ ಯಜಮಾನರುಗಳು, ಹಿರಿಯರು ಅಥವಾ ಅನುಭವಿಗಳು ನಿರ್ಧರಿಸುತ್ತಾರೆ.

<u>4.1.6: ಇತರ</u>: ಕೋಳಿಗಳನ್ನು ಕಾಳಗ ಮಾಡಿಸುವ ಮೊದಲು ಕೋಳಿಗಳನ್ನು ಪರಸ್ಪರ ಮುಖಾಮುಖಿಯಾಗಿ ಹತ್ತಿರ ಬಿಟ್ಟು ಪರಿಚಯ ಮಾಡಿಸುತ್ತಾರೆ. ಈ ಕ್ರಿಯೆಯನ್ನು 'ಒಡ್ಡಾವುನೆ' ಎಂದು ಕರೆಯುತ್ತಾರೆ. 'ಒಡ್ಡಾವುನೆ' ಎಂದರೆ ಕೋಳಿಗಳೆರಡನ್ನು ಮುಖಾಮುಖಿಯಾಗಿಸುವುದು. ಇದು ಕೋಳಿಗಳಿಗೆ ರೋಷ ಬರುವಂತೆ ಮಾಡಿ ಕಾಳಗಕ್ಕೆ ನಡೆಸುವ ಆರಂಭದ ಕ್ರಿಯೆ. ಹೀಗೆ ಒಡ್ಡಿಸುವಾಗ ಕೋಳಿಗಳು ,ಕತ್ತು ಬಗ್ಗಿಸಿ ಕತ್ತಿನ ಗರಿ ನಿಮಿರಿಸಿ ಒಂದನ್ನೊಂದು ದುರದುರನೆ ನೋಡಿ ಒಂದರ ತಲೆಗೆ ಇನ್ನೊಂದು ಕುಕ್ಕಲು ಪ್ರಯತ್ನಿಸುತ್ತದೆ. ಆಗ ಕೋಳಿ ಬಿಡುವವರು ಸರಕ್ಕನೆ ಕೋಳಿಗಳನ್ನು ಹಿಂದಕ್ಕೆಳೆದುಕೊಳ್ಳುತ್ತಾರೆ. ಒಂದು ವೇಳೆ ಯಾವುದೇ ಕೋಳಿ ಒಡ್ಡದೆ ಇದ್ದರೆ ಒಂದು ಸುತ್ತು ಕೋಳಿಯನ್ನು ತಿರುಗಿಸಿ ಜಾಗ ಬದಲಾಯಿಸಿ ಒಡ್ಡಿಸುತ್ತಾರೆ. ಆಮೇಲೆ ಕಾಳಗಕ್ಕೆ ಬಿಡುತ್ತಾರೆ. ಕಾಳಗದಲ್ಲಿ ಕೋಳಿಗಳಿಗೆ ಗಾಯವಾದರೆ ಆ ಕೋಳಿಗಳನ್ನು ಕಾಳಗದಿಂದ ಹಿಂತೆಗೆದುಕೊಳ್ಳಬೇಕು. ಇದಕ್ಕೆ ಜಾಣತನ ಅಗತ್ಯ. ಒಂದು ವೇಳೆ ಎದುರು ಪಕ್ಷದವನ ಕೋಳಿಯನ್ನು ಎತ್ತಿದರೆ ಕೋಳಿ ಸೋತಿತು ಎಂದು ಒಪ್ಪಿಕೊಂಡು ಕಾಳಗ ನಿಲ್ಲಿಸುವ ಪರಿಸ್ಥಿತಿ ಬರುತ್ತದೆ. ಅದಕ್ಕಾಗಿ ಬಹಳ ಜಾಗರೂಕತೆಯಿಂದ ಕೋಳಿ ಬಿಡುವ ವ್ಯಕ್ತಿ ತಾನು ಬಿಟ್ಟ ಕೋಳಿಯನ್ನೇ ಹಿಡಿದುಕೊಳ್ಳುತ್ತಾನೆ. ಆಮೇಲೆ ಕೋಳಿಗಳಿಗೆ ಆರೈಕೆ ಮಾಡಿ ಸೋಲು ಗೆಲುವು ನಿರ್ಣಯವಾಗುವ ತನಕ ಕಾಳಗ ಮಾಡಿಸುತ್ತಾರೆ. ಸೋಲು ಗೆಲುವು ನಿರ್ಣಯ ಆದ ಮೇಲೆ ಕಾಳಗ ನಿಲ್ಲುತ್ತದೆ.

ಈ ರೀತಿಯಲ್ಲಿ ಒಂದಾದ ಮೇಲೊಂದು ಕ್ರಿಯೆ ಹಂತ ಹಂತವಾಗಿ ಮುಂದುವರಿದು ಕೋಳಿಅಂಕ ಸೋಲು ಗೆಲುವಿನೊಂದಿಗೆ ಮುಕ್ತಾಯವಾಗುತ್ತದೆ. ಗೆದ್ದ

ಕೋಳಿಯೊಂದಿಗೆ ಕೋಳಿಯ ಯಜಮಾನ ಸೋತ ಕೋಳಿಯನ್ನು ಎತ್ತಿಕೊಂಡು ಮನೆಗೆ ಹೋಗಿ ಸಾಂಬಾರು ಮಾಡುತ್ತಾನೆ.

ಜೂಜು ಕಟ್ಟುವುದು ಇಬ್ಬರು ಯಜಮಾನರುಗಳು. ಆದರೆ ನೋಡಲು ಬಂದ ಜನರುಗಳು ಅವರವರೊಳಗೆ ಜೂಜು ಕಟ್ಟಿಕೊಳ್ಳುವ ಕ್ರಮವೂ ಇದೆ.

## 4.2: ಕೋಳಿಅಂಕದ ಬಗೆಗೆ ಇತರ ಮಾಹಿತಿಗಳು

ಕೋಳಿಗಳನ್ನು ಸಾಮಾನ್ಯವಾಗಿ ಮಾಂಸಾಹಾರಿಗಳು ಸಾಕುತ್ತಾರೆ. ಕೃಷಿ ಪ್ರಧಾನ ಪ್ರದೇಶಗಳಲ್ಲಿ ಧಾರಾಳವಾಗಿ ಕೋಳಿಗಳನ್ನು ಸಾಕುವುದನ್ನು ಕಾಣಬಹುದು. ಮನುಷ್ಯ ತನ್ನ ಕೃಷಿ ಭೂಮಿಯನ್ನು ಉತ್ತು, ಬಿತ್ತಿ ಉಳಿದ ಸಮಯವನ್ನು ಬೇರೆ ಬೇರೆ ಕೆಲಸ ಕಾರ್ಯಗಳಲ್ಲಿ ಕಳೆಯುವುದು ಬೆಳೆದು ಬಂದ ಪದ್ಧತಿ. ಮಾಂಸಾಹಾರಿ ಸಮಾಜ ತಾನು ಸಾಕಿದ ಕೋಳಿಗಳನ್ನು ಕೊಂದು ತಿಂದು ಸುಖ ಪಡುವುದಕ್ಕಿಂತ ಅವುಗಳೆರಡರ ಮಧ್ಯೆ ಕಾಳಗ ನಡೆಯುವಂತೆ ಮಾಡಿ ಕಾಳಗದಲ್ಲಿ ಸತ್ತ ಕೋಳಿಯನ್ನು ತಿನ್ನುವುದನ್ನು ರೂಢಿಸಿಕೊಂಡಿರಬೇಕು. ತನಗೆ ಹೆಚ್ಚಿನ ಮನರಂಜನೆಗಾಗಿ ಕೋಳಿ ಅಂಕವನ್ನು ಕ್ರೀಡೆಯಾಗಿ ನಡೆಸಿಕೊಂಡು ಬಂದಿರಬೇಕು.

<u>4.2.1: ಕೋಳಿ ಸಾಕಣೆ</u>: ಸಣ್ಣ ಮರಿಗಳಿರುವಾಗಲೇ ಅಂಕಕ್ಕೆ ಆಗುವಂತಹವುಗಳನ್ನು ಬೇರ್ಪಡಿಸಿ ಸಾಕಲಾಗುತ್ತದೆ. ಕೋಳಿಅಂಕದಲ್ಲಿ ಒಳ್ಳೆಯ ಅನುಭವ ಹೊಂದಿದ ವ್ಯಕ್ತಿಗಳು ಒಳ್ಳೆಯ ತಳಿಯನ್ನು ಮರಿಗಳಿರುವಾಗಲೇ ಗುರುತಿಸುವ ಸಾಮರ್ಥ್ಯ ಹೊಂದಿರುತ್ತಾರೆ. ಹೀಗೆ ಗುರುತಿಸಿ ಬೇರ್ಪಡಿಸಿದ ಕೋಳಿಗಳನ್ನು ಉಳಿದ ಕೋಳಿಗಳಂತೆ ಬಿಟ್ಟು ಸಾಕುವುದಿಲ್ಲ. ಅವುಗಳನ್ನು ಹಗ್ಗದಲ್ಲಿ ಕಟ್ಟಿಹಾಕಿ ಸಾಕುತ್ತಾರೆ. ಅಂತಹ ಕೋಳಿಗಳಿಗೆ ಸಮಯಕ್ಕೆ ಸರಿಯಾಗಿ ಆಹಾರ ಕೊಡುತ್ತಾರೆ. ಭತ್ತವನ್ನು ಮುಖ್ಯ ಆಹಾರವಾಗಿ ಅಂಕದ ಕೋಳಿಗೆ ಕೊಡುತ್ತಾರೆ. ಭತ್ತವನ್ನು ಕೊಡುವಾಗ ಚೆನ್ನಾಗಿ ತೊಳೆದು ಹಾಕುತ್ತಾರೆ. ಯಾಕೆಂದರೆ ಈಚಿನ ದಿನಗಳಲ್ಲಿ ಭತ್ತಕ್ಕೆ ಸಿಂಪಡಿಸುವ ಔಷಧಗಳು ಬಹಳ ವಿಷಯುಕ್ತವಾಗಿರುತ್ತದೆ. ಆ ಭತ್ತ ಒಣಗಿದ ಮೇಲೂ ತನ್ನ ವಿಷದ ಗುಣವನ್ನು ಪೂರ್ತಿ ಕಳೆದುಕೊಂಡಿರುವುದಿಲ್ಲ. ತೊಳೆಯದೆ ಉಪಯೋಗಿಸಿದರೆ ಕೋಳಿಗಳು ರೋಗಕ್ಕೆ ತುತ್ತಾಗಿ ಸತ್ತು ಹೋಗಬಹುದು. ಅಂಕದ ಕೋಳಿಗಳ ಎದುರಿನಿಂದ ನೀರನ್ನು ತಪ್ಪಿಸಬಾರದು. ಸರಾಸರಿ ಮೂರು ಗಂಟೆಗಳಿಗೊಮ್ಮೆಯಾದರೂ ನೀರು ಬದಲಾಯಿಸುತ್ತಿರುತ್ತಾರೆ. ಯಾಕೆಂದರೆ ಕೋಳಿಗಳನ್ನು ಗೂಟಕ್ಕೆ ಕಟ್ಟಿ ಸಾಕುತ್ತಿರುವುದರಿಂದಾಗಿ ಅವುಗಳು ನೀರನ್ನು ಚೆಲ್ಲಬಹುದು. ನೀರಿಗೆ ಹೇತು ಹಾಕಬಹುದು ಅಥವಾ ಇತರ ಪ್ರಾಣಿ,ಪಕ್ಷಿಗಳಾದ ನಾಯಿ, ಕೋಳಿಗಳು ನೀರನ್ನು ಕುಡಿಯಬಹುದು. (ಕೋಳಿಗಳಿಗೆ ನೀರು ಮತ್ತು ಆಹಾರ ಇಡುವ ಪಾತ್ರೆಯನ್ನು ನೋಡಿ: ಚಿತ್ರ ಸಂಖ್ಯೆ.6)

ಈ ಪಾತ್ರೆಯನ್ನು ಮರದಿಂದ ತಯಾರಿಸುತ್ತಾರೆ. ಇದರಲ್ಲಿ ಎರಡು ಭಾಗಗಳಿವೆ. ಒಂದರಲ್ಲಿ ನೀರು ಮತ್ತೊಂದರಲ್ಲಿ ಭತ್ತ ಹಾಕುತ್ತಾರೆ. ಕೆಲವರು ತೆಂಗಿನಕಾಯಿಯ ಗೆರಟೆಗಳನ್ನು ಇದಕ್ಕಾಗಿ ಬಳಸುತ್ತಾರೆ.

ಅಂಕದ ಕೋಳಿಗಳನ್ನು ಉಳಿದ ಕೋಳಿಗಳಂತೆ ಬಿಟ್ಟು ಸಾಕುವುದಿಲ್ಲ. ಅವುಗಳಿಗೆ ನಿಯಮಿತವಾದ ಆಹಾರ ನೀಡುತ್ತಾರೆ. ಅವುಗಳನ್ನು ಬಿಟ್ಟು ಮೇಯಿಸಿದರೆ ಅವುಗಳು ದೊರೆಯುವ ಎಲ್ಲಾ ಆಹಾರಗಳನ್ನು ಸೇವಿಸುವುದರಿಂದ ದೈಹಿಕವಾಗಿ ಪುಷ್ಟಿಯಾಗಲಾರದು. ಜೊತೆಗೆ ಹೇಟೆಯೊಂದಿಗೆ ಹೋಗುವುದರಿಂದ ತನ್ನ ವೀರ್ಯ ಶಕ್ತಿಯನ್ನು ಕಳಕೊಳ್ಳಬಹುದು. ಕಟ್ಟಿ ಹಾಕಿ ಪುಷ್ಟಿದಾಯಕ ಆಹಾರವನ್ನು ನೀಡುವುದರಿಂದಾಗಿ ಅಂಕದ ಕೋಳಿಗಳ ರುಚಿ ಉತ್ತಮವಾಗಿರುತ್ತದೆ. ಅಂಕದ ನೆಪದಲ್ಲಿ ಜನ ಕೋಳಿಗಳನ್ನು ಕ್ರಮಬದ್ಧವಾಗಿ ಸಾಕುವುದು ಸಾಮಾನ್ಯ. ''ಮೂರರಿಂದ ಹೆಚ್ಚು ಅಂಕದ ಕೋಳಿಗಳನ್ನು ಒಂದೇ ಪಾತ್ರೆಯಲ್ಲಿ ಬೇಯಿಸಿದರೆ ಅದರ ರುಚಿ ಬಹಳ ಉತ್ತಮವಾಗಿರುವುರಿಂದಾಗಿ ಅಂಕದಕೋಳಿಗಳನ್ನು ತಿನ್ನುವ ಉದ್ದೇಶದಿಂದಲೇ ಜನ ಹೆಚ್ಚು ಹೆಚ್ಚು ಕೋಳಿಅಂಕಕ್ಕೆ ಹೋಗುತ್ತಾರೆ'' ಎಂದು ರಾಮಣ್ಣ ರೈ ಅವರು ಹೇಳುತ್ತಾರೆ.

4.2.2: ಕೋಳಿಗಳ ಜಾತಿಗಳು: ಅಂಕಕ್ಕೆ ತರುವ ಕೋಳಿಗಳಲ್ಲಿ ಹಲವು ಜಾತಿಯ ಕೋಳಿಗಳನ್ನು ಕಾಣಬಹುದು. ಊರಿನ ಕೋಳಿಗಳನ್ನು ಕಾಳಗಕ್ಕೆ ಬಳಸುತ್ತಿದ್ದ ಜನ ಬರಬರುತ್ತ, ಬೇರೆ ಬೇರೆ ಸ್ಥಳಗಳಿಂದ ಕೋಳಿಗಳನ್ನು ತರಲಾರಂಭಿಸಿದರು. ಜೊತೆಗೆ ತಮ್ಮಲ್ಲಿ ಸಾಕುವ ಕೋಳಿಗಳಿಗೆ ಬೇರೆ ತಳಿಯ ಕೋಳಿಗಳೊಂದಿಗೆ ಸಂಧಿಸುವಂತೆ ಮಾಡಿ ಮರಿಗಳನ್ನು ಪಡೆದು ಅಂಕಕ್ಕೆ ಬೇಕಾಗಿಯೇ ಸಾಕಲಾರಂಭಿಸಿದರು. ಅವುಗಳಲ್ಲಿ ಕೆಲವನ್ನು ಗುರುತಿಸಬಹುದು.

ಊರಿನ ಕೋಳಿ, ಸೇಲಂ, ನರ್ಕಾಡಿ, ಡಿಂಡಿಗಲ್, ಪಲನಿ, ಗಿರಿರಾಜ, ಕೊಟ್ಟು ಚಾಲೆ, ಗಡ್ಡವೆ ಇತ್ಯಾದಿ.

ಸೇಲಂ, ಡಿಂಡಿಗಲ್, ಪಲನಿ ಈ ಮುಂತಾದ ಕೋಳಿಗಳು ನೋಡುವುದಕ್ಕೂ ಸುಂದರವಾಗಿರುತ್ತವೆ. ಬಾಲದ ಗರಿ ಉದ್ದವಾಗಿರುತ್ತದೆ. ಇವುಗಳ ಹೆಸರುಗಳು ಕೋಳಿಗಳನ್ನು ಸಾಕುತ್ತಿದ್ದ ಸ್ಥಳಹೆಸರುಗಳಿಂದಲೇ ಬಂದಿರಬೇಕು. ಆದುದರಿಂದ ಈ ಕೋಳಿಗಳು ಈ ರೀತಿಯ ಹೆಸರುಗಳಿಂದ ಪ್ರಸಿದ್ಧವಾಗಿರಬೇಕು.

ಗಿರಿರಾಜ ಕೋಳಿಯನ್ನು ಅಂಕಕ್ಕೆ ಕಟ್ಟುವುದಿಲ್ಲ. ಯಾಕೆಂದರೆ ಈ ಕೋಳಿಗಳಿಗೆ ಸಾಮರ್ಥ್ಯ, ಧೈರ್ಯ ಇರುವುದಿಲ್ಲ. ಈ ಜಾತಿಯ ಕೋಳಿಗಳನ್ನು ಆಹಾರಕ್ಕಾಗಿ ಮಾತ್ರ ಸಾಕುತ್ತಾರೆ. ಅದುದರಿಂದ ಇದು ನೋಡುವುದಕ್ಕೆ ಪುಷ್ಠಿಯಾಗಿರುತ್ತದೆ. ಇದರಿಂದಾಗಿ ಗಿರಿರಾಜ ಹೇಟೆಗಳನ್ನು ಊರಿನ ಕೋಳಿಯೊಂದಿಗೆ ಸಂಧಿಸುವಂತೆ ಮಾಡಿ ಹೊಸ ತಳಿಯ ಕೋಳಿಯನ್ನು ಪಡೆದು ಅಂಕಕ್ಕಾಗಿ ಸಾಕುತ್ತಾರೆ.

ಕೊಟ್ಟುಚಾಲೆ, ಕೊಟ್ಟು ಎಂದು ಜುಟ್ಟು. ಇದರ ಬುಡದಲ್ಲಿ ಕೆಲವು ಗರಿಗಳಿರುತ್ತವೆ. ಇದರಿಂದ ಕೊಟ್ಟುಚಾಲೆ ಎಂದು ಕರೆಯುತ್ತಾರೆ. ಈ ಕೋಳಿಯ ತಳಿಯನ್ನು ಮರ್ಕಾಡಿರಾಮಯ್ಯ ನಾಯ್ಕ ಎಂಬ ವರು ಕೃತಕವಾಗಿ ಸೃಷ್ಟಿಸಿದ್ದು. ''ಸಮುದ್ರದ ಬದಿಯ ಮರಳಿನಲ್ಲಿ ಹೊಂಡ ಮಾಡಿ ಹೇಟೆಯನ್ನು ಹೊಂಡದಲ್ಲಿ ಕೂರಿಸಿ ಅದಕ್ಕೆ ಬಲೆಯನ್ನು ಮುಚ್ಚುತ್ತಾರೆ. ಕೊಟ್ಟು (ಜುಟ್ಟು) ಇರುವ ಹದ್ದು ಸಮುದ್ರದ ಬದಿಯಲ್ಲಿ ಸುತ್ತುತ್ತಿರುತ್ತದೆ. ಅವುಗಳಿಗೆ ಕಾಣುವಂತೆ ಈ ಹೇಟೆಯನ್ನು ಇರಿಸುವುದರಿಂದ ಹೇಟೆಯನ್ನು ಕಂಡ ಕೂಡಲೇ ಹದ್ದು ಹೇಟೆಯನ್ನು ಬಂದು ಸೇರುತ್ತದೆ. ಇದರಿಂದಾಗಿ ಕೊಟ್ಟುಚಾಲೆ ಕೋಳಿಗಳು ಹುಟ್ಟಿದವು'' ಎಂದು ನಿರೂಪಕರು ಅಭಿಪ್ರಾಯ ಪಡುತ್ತಾರೆ.

ಗಡ್ಡವೆ ಎಂದರೆ ಕುತ್ತಿಗೆಯ ಕೆಳಗೆ ಗರಿಗಳು ಗಡ್ಡದ ರೀತಿಯಲ್ಲಿರುವುದು. ಇದರಿಂದ ಇದನ್ನು ಗಡ್ಡವೆ ಎಂದು ಕರೆಯುತ್ತಾರೆ. ಗರಿ ಉದ್ದವಾಗಿ ಮೊನಚಾಗಿದ್ದರೆ ಅದನ್ನು 'ಜಳ್ಳ' ಎನ್ನುವರು. ಹೇಟೆಯ ರೀತಿಯ ಬಣ್ಣ ಇದ್ದು ಸಣ್ಣದಾಗಿದ್ದರೆ ಅದನ್ನು 'ಪೆರಡಿಂಗ' ಎಂದು ಕರೆಯುತ್ತಾರೆ.

ದೊಡ್ಡ ಜಾತಿಯ ಹುಂಜಗಳನ್ನು 'ಪೈಕಾ' ಎಂದು ಕರೆಯುತ್ತಾರೆ. ಸಣ್ಣ ಜಾತಿಯ ಹುಂಜಗಳನ್ನು 'ಜೀಕಾ' ಎಂದು ಕರೆಯುತ್ತಾರೆ.

ಕೋಳಿಗಳಲ್ಲಿ ಮುಖ್ಯವಾಗಿ ಬಣ್ಣಕ್ಕೆ ಪ್ರಾಧಾನ್ಯ. ಪ್ರಧಾನವಾಗಿ ಐದು ಬಣ್ಣಗಳನ್ನು ಗುರುತಿಸುತ್ತಾರೆ. ಈ ಐದು ಬಣ್ಣಗಳನ್ನಿಟ್ಟುಕೊಂಡು ಉಪಬಣ್ಣಗಳನ್ನು ಗುರುತಿಸುತ್ತಾರೆ.

ಕಪ್ಪು (ಕಕ್ಕೆ), ಕೆಂಪು, ಬೊಳ್ಳ(ಬಿಳಿ), ಮುಂಜಲೆ(ಹಳದಿ), ಕಡ್ಲೆ ಇವು ಐದು ಪ್ರಧಾನ ಬಣ್ಣಗಳು. ಇವುಗಳ ಉಪಬಣ್ಣಗಳು ಹೀಗಿವೆ. ಮೈಪೆ, ಕರಿನೀಲೆ, ನೀಲೆ, ಕಪ್ಪುಗಿಡಿಯೆ, ಕೆಮ್ಮೈರೆ, ಕೆಂಪುಗಿಡಿಯೆ, ಉರಿಯೆ, ಕುಪ್ಲೆ, ಕಬೊರ್ಳೆ, ಕಾವೆ, ಪಂಚಣಿ,(ಐದು ಬಣ್ಣಗಳು ಸೇರಿ ಆಗುವ ಬಣ್ಣ ಪಂಚಣಿ) ಹೀಗೆ ಬಣ್ಣಗಳಿಗೆ ಅನುಸಾರವಾಗಿ ಪಟ್ಟಿ ಬೆಳೆಯುತ್ತದೆ. ಬಣ್ಣಗಳು ಇಷ್ಟೇ ಇದೆ ಎಂದು ನಿರ್ದಿಷ್ಟವಾಗಿ ಹೇಳುವುದು ಸಾಧ್ಯವಿಲ್ಲ. ಗರಿಗಳ ಬಣ್ಣಗಳಿಗೆ ಅನುಗುಣವಾಗಿ ಹೆಸರುಗಳು ಬದಲಾಗುತ್ತಿರುತ್ತವೆ. ಒಂದು ಗರಿ ಬೇರೆ ಇದ್ದರೂ ಅದು ತನ್ನ ಹೆಸರಿನ ಜೊತೆಗೆ ಗರಿಯ ಬಣ್ಣದ ಹೆಸರು ಸೇರಿಕೊಳ್ಳುತ್ತದೆ. ಉದಾಹರಣೆಗೆ ಬಿಳಿಕೋಳಿಯಲ್ಲಿ ಕೆಂಪು ಬಣ್ಣದ ಗರಿ ಸೇರಿದರೆ ಅದು ಗೆಂದಬೊಳ್ಳ ಎಂದು ಕರೆಯುತ್ತಾರೆ. ಅದೇ ರೀತಿ ಇತರ ಕೋಳಿಗಳಿಗೂ ಹೆಸರು ಬರುತ್ತದೆ.

ಹುಂಜಗಳಿಗೆ ಬೇರೆ ಬೇರೆ ರೀತಿಯ ಜುಟ್ಟು ( tuft ) ಗಳಿರುವುದನ್ನು ಕಾಣಬಹುದು. ಜುಟ್ಟುಗಳಿಗೆ ಅನುಗುಣವಾಗಿ ಹೆಸರುಗಳಿರುತ್ತವೆ. ಅವುಗಳು ಈ ಕೆಳಗಿನಂತಿವೆ.

ಕಂಬೆಲ್ ಕೊಟ್ಟು (ಹಾಗಲಕಾಯಿ ಜುಟ್ಟು), ಸುತ್ತೈ ಕೊಟ್ಟು (ಸುತ್ತಿಗೆ ಅಥವಾ ಮುಂಡಾಸು ಜುಟ್ಟು),ರೂಪಾಯಿ ಕೊಟ್ಟು(ರೂಪಾಯಿಯ ರೀತಿಯಲ್ಲಿರುವ ಜುಟ್ಟು) ಈ ಮುಂತಾದ ರೀತಿಯ ಕೋಳಿ ಜುಟ್ಟುಗಳಿವೆ. ಕೋಳಿ

ಯಾವ ರೀತಿಯ ಜುಟ್ಟನ್ನು ಹೊಂದಿದೆಯೋ ಅದಕ್ಕೆ ಅನುಗುಣವಾಗಿ ಅವುಗಳನ್ನು ಗುರುತಿಸುತ್ತಾರೆ. ಉದಾಹರಣೆಗೆ ಕಂಚಿಲಕೊಟ್ಟುದಬೊಳ್ಳೆ, ಸಾಸ್ರು ಕೊಟ್ಟುದಪೆರ್ಮೈರೆ ಈ ರೀತಿಯಲ್ಲಿ ಕರೆಯುತ್ತಾರೆ.

<u>4.2.3: ಬಾಳುಗಳ ವಿಧಗಳು:</u> ಕೋಳಿಗಳನ್ನು ಕಾದಾಡಿಸುವುದಕ್ಕಾಗಿ ಅವುಗಳ ಕಾಲಿಗೆ ಬಾಳುಗಳನ್ನು (ಉಕ್ಕಿನಿಂದ ತಯಾರಿಸಿದ ಚೂಪಾದ ಚೂರಿಯಂತಹ ಅಸ್ತ್ರ) ಬಳಸುತ್ತಾರೆ. ಹಿಂದಿನ ಕಾಲದಲ್ಲಿ ಕೋಳಿಗಳ ಕಾಲಿಗೆ ಮುಳ್ಳು, ಕಬ್ಬಿಣದ ಚೂಪಾದ ಕಡ್ಡಿ, ಬಿದಿರಿನ ಮುಳ್ಳು, ಕಬ್ಬಿಣದ ಕತ್ತಿ ಮತ್ತು ಕೋಳಿಗಳಿಗೆ ವಯಸ್ಸಾದಂತೆ ಅವುಗಳ ಕಾಲುಗಳಲ್ಲಿ ಬರುವ ಮುಳ್ಳುಗಳನ್ನೇ ಅಸ್ತ್ರದ ರೂಪದಲ್ಲಿ ಬಳಸಿ ಕೋಳಿಗಳನ್ನು ಕಾದಾಡಿಸುತ್ತಿದ್ದರಂತೆ. ಆದರೆ ಈ ಮಾಹಿತಿಗಳಿಗೆ ಎಲ್ಲಿಯೂ ಆಧಾರ ದೊರೆಯುವುದಿಲ್ಲ.

ಈಚಿಗೆ ಇವುಗಳೆಲ್ಲ ಮಾಯವಾಗಿ ಉಕ್ಕಿನಿಂದ ತಯಾರಿಸಿದ ಕತ್ತಿ(ಬಾಳು)ಗಳನ್ನೆ ಕೋಳಿಗಳ ಕಾಲಿಗೆ ಕಟ್ಟಿ ಕಾಳಗ ಮಾಡಿಸುತ್ತಾರೆ. ಹಿಂದೆ ಬಾಳುಗಳನ್ನು ಸೀಮಿತ ಜನರು ಮಾತ್ರ ಹೊಂದಿರುತ್ತಿದ್ದರು. ಅವುಗಳನ್ನು ಗ್ರಾಮದ ಜನರು ಕೋಳಿ ಅಂಕಕ್ಕೆ ಹೋಗುವಾಗ ಬಳಸುತ್ತಿದ್ದುದರಿಂದ ಕೋಳಿಗಳು ಹೆಚ್ಚು ಹೆಚ್ಚು ಗೆಲ್ಲುತ್ತಿತ್ತಂತೆ. ಈಗ ಅಂಕಕ್ಕೆ ಹೋಗುವ ಪ್ರತಿಯೊಬ್ಬನಲ್ಲೂ ಬಾಳುಗಳ ಕಟ್ಟು ಇರುವುದರಿಂದಾಗಿ ಹೆಚ್ಚು ಕಾಲ ಕೋಳಿಗಳು ಕಾಳಗ ಮಾಡಿಸಲು ಉಳಿಯುವುದಿಲ್ಲ. ಹೆಚ್ಚೆಂದರೆ ಐದು ಆರು ಕೋಳಿಗಳನ್ನು ಗೆದ್ದು ಸತ್ತು ಹೋಗುತ್ತವೆ. ಹಿಂದೆ '' ಐವತ್ತು ಕೋಳಿಗಳನ್ನು ಗೆದ್ದ ಕೋಳಿಗಳು ಇತ್ತು '' ಎಂದು ಕೋಚಣ್ಣ ರೈ ಅವರು ಹೇಳುತ್ತಾರೆ.

ಆಧುನಿಕ ಕಾಲದಲ್ಲಿ ಬಳಕೆಯಲ್ಲಿರುವ ಬಾಳುಗಳ ವಿಧಗಳು ಈ ಕೆಳಗಿನಂತಿವೆ.

(1). ಬಡೆಕ್ಕಾಯಿ ಬಾಳ್ (ಉತ್ತರದ ಬಾಳು)

(2). ತೆನ್ಕಾಯಿ ಬಾಳ್ ಅಥವಾ ಊರಬಾಳ್ (ದಕ್ಷಿಣದ ಬಾಳು)

(3). ನಾಗರ ಕೆರ್ಚ, ಕೆರ್ಚ

(4). ಎಟ್ಟ ಮುಳ್ಳು

ಇವುಗಳು ಮುಖ್ಯ ಬಾಳುಗಳು. ಇವುಗಳ ಹೆಸರುಗಳು ಪ್ರದೇಶದಿಂದ ಪ್ರದೇಶಕ್ಕೆ, ಜನರಿಂದ ಜನರಿಗೆ ಬದಲಾಗುತ್ತಿರುತ್ತದೆ.

ಸರ್ತದ ಬಾಳ್ (ನೇರವಾಗಿರುವ ಬಾಳು), ಅರೆಕೊಕ್ಕ (ಅರ್ಧ ಬಾಗಿದ ಬಾಳು), ಅಣೆಡೊಂಕು (ಬಾಳಿನ ಹಿಡಿ ಡೊಂಕಾಗಿರುವುದು) ಈ ರೀತಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. (ಬಾಳುಗಳಿಗೆ ನೋಡಿ ಚಿತ್ರ ಸಂಖ್ಯೆ.7)

ಬಾಳುಗಳನ್ನು ಎಲ್ಲರಿಂದಲೂ ಕೋಳಿಯ ಕಾಲಿಗೆ ಕಟ್ಟುವುದು ಸಾಧ್ಯವಿಲ್ಲ. ಇದಕ್ಕೆ ಅನುಭವ ಅಗತ್ಯ. ಬಾಳು ಕಟ್ಟುವಾಗ ವ್ಯತ್ಯಾಸವಾದರೆ ಎದುರಿನ ಕೋಳಿಗೆ ಗಾಯ ವಾಗದು.

ಬಡಕ್ಕಾಯಿ ಬಾಳನ್ನು ಕಟ್ಟುವಾಗ ಕೋಳಿಯ ಕಾಲಿಗೆ ಅರಿವೆಯನ್ನು ಸುತ್ತುತ್ತಾರೆ. ಆಮೇಲೆ ಬಾಳನ್ನು ಇಟ್ಟು 'ದೋರೆ' ಯಲ್ಲಿ ಕಟ್ಟುತ್ತಾರೆ. ಕೋಳಿಗೆ ಬಾಳನ್ನು ಕಟ್ಟಲು ಉಪಯೋಗಿಸುವ ದಾರವನ್ನು 'ದೋರೆ' ಎಂದು ಕರೆಯುತ್ತಾರೆ. ತೆನ್ಕಾಯಿ ಬಾಳು ಅಥವಾ ಊರಬಾಳಿಗೆ ಅರಿವೆ ಇಡುವ ಕ್ರಮ ಇಲ್ಲ.

ಬಾಳುಗಳು ಬೇರೆ ಬೇರೆ ಆಕಾರದವುಗಳಾಗಿರುತ್ತವೆ. ದೊಡ್ಡ ಕೋಳಿಗಳಿಗೆ ದೊಡ್ಡ ಬಾಳುಗಳು, ಸಣ್ಣ ಕೋಳಿಗಳಿಗೆ ಸಣ್ಣ ಬಾಳುಗಳನ್ನು ಉಪಯೋಗಿಸುತ್ತಾರೆ. ಕೋಳಿಯ ಯಜಮಾನ ಇಚ್ಛಿಸಿದ ಬಾಳನ್ನು ಕೋಳಿಗೆ ಕಟ್ಟಬಹುದು. ಅದಕ್ಕೆ ಯಾರೂ ಆಕ್ಷೇಪ ಎತ್ತುವಂತಿಲ್ಲ. ಬಾಳುಗಳು ತುಂಬಾ ಇರುವುದರಿಂದ ಅದಕ್ಕಾಗಿಯೇ 'ಬಾಳಸೂಡಿ' ಅಥವಾ ಬಾಳುಗಳನ್ನು ಇಡುವ ಪೆಟ್ಟಿಗೆಯನ್ನು ಮಾಡಿಕೊಂಡಿರುತ್ತಾರೆ. ಬಾಳುಗಳನ್ನು ಜಾಗರೂಕತೆಯಿಂದ ಹರಿತ ಮಾಡಿ ಬಟ್ಟೆಯ ಚೀಲ ಮಾಡಿ ಅಥವಾ




ಅಂಕದ ಕೋಳಿಗಳನ್ನು ಸಾಕುವಾಗ ಆಹಾರ, ನೀರು ನೀಡಲು ಉಪಯೋಗಿಸುವ ಪಾತ್ರೆ (ಚಿತ್ರಸಂಖ್ಯೆ:6)



ವಿವಿಧ ರೀತಿಯ ಬಾಳುಗಳು, (ಚಿತ್ರ ಸಂಖ್ಯೆ:7).




ಅಂಕದ ಕೋಳಿಗಳನ್ನು ಸಾಕುವಾಗ ಆಹಾರ, ನೀರು ನೀಡಲು ಉಪಯೋಗಿಸುವ ಪಾತ್ರೆ (ಚಿತ್ರಸಂಖ್ಯೆ:6)



ವಿವಿಧ ರೀತಿಯ ಬಾಳುಗಳು, (ಚಿತ್ರ ಸಂಖ್ಯೆ:7).

ಬಟ್ಟೆಂತುಲ್ಲಿ ಸುತ್ತಿ ಪೆಟ್ಟಿಗೆಂತುಲ್ಲಿಟ್ಟು ಕೊಂಡಿರುತ್ತಾರೆ. (ಬಾಳಸಾಡಿಗೆ ನೋಡಿ: ಅನುಬಂಧ: 4. )

4.2.4: ಕೋಳಿ ಪಂಚಾಂಗ: ಕೋಳಿಅಂಕಕ್ಕೆ ಹೋಗುವಾಗ ಕೈಗೆ ಸಿಕ್ಕಿದ ಕೋಳಿಂತುನ್ನು ತೆಗೆದುಕೊಂಡು ಹೋಗುವಂತಿಲ್ಲ. ಅದಕ್ಕೆ ಒಂದು ಪಂಚಾಂಗ ಇದೆ. ಈಗ ಅದು ಮುದ್ರಣಗೊಂಡು ಸಿಗುತ್ತದೆ. ಅದರಲ್ಲಿ ವಾರ, ತಿಥಿ, ಪಕ್ಷಗಳಿಗೆ ಅನುಗುಣವಾಗಿ ಂತಾವ ದಿನ ಂತಾವ ಕೋಳಿ ಸೋಲುವುದು, ಗೆಲ್ಲುವುದು ಎಂದು ಬರೆದಿದೆ. ಅದಕ್ಕೆ ಅನುಗುಣವಾಗಿ ಜನ ಕೋಳಿಗಳನ್ನು ಕಾಳಗಕ್ಕೆ ಕೊಂಡುಹೋಗುತ್ತಾರೆ. ಕೋಳಿಗೆ ಹುಟ್ಟು, ಬಾಲ್ಯ, ಂತಾವನ, ವೃದ್ಧಾಪ್ಯ, ಮರಣ ಹೀಗೆ ಐದು ಲಕ್ಷಣಗಳಿವೆ. ಅವುಗಳನ್ನು ಪಂಚಾಂಗ ವಿವರಿಸುತ್ತದೆ. ಅದ್ದುದರಿಂದ ಕೋಳಿ ಅಂಕಕ್ಕೆ ಹೋಗುವ ಪ್ರತಿಂತೊಬ್ಬನು ಪಂಚಾಂಗವನ್ನು ಉಪಂತೋಗಿಸುತ್ತಾನೆ. ಕೆಲವರು ತಮ್ಮ ಅನುಭವದಿಂದ ಕೋಳಿ ಂತಾವುದು ಗೆಲ್ಲುವುದು ಎಂದು ನಿರ್ಧರಿಸುವ ಸಾಮರ್ಥ್ಯ ಗಳಿಸಿರುತ್ತಾರೆ. 'ಕುಕ್ಕುಟ ಪಂಚಾಂಗ' ಕೋಳಿಅಂಕಕ್ಕೆ ಹೋಗುವವರಿಗೆ ಮಾರ್ಗದರ್ಶಿ ಪುಸ್ತಕವಾಗಿದೆ.

ಪಂಚಾಂಗದಲ್ಲಿ ನಿರೂಪಿತವಾದಂತೆ ಕೋಳಿಗಳನ್ನು ಅಂಕಕ್ಕೆ ಕೊಂಡು ಹೋದರೆ ಅದು ಗೆಲ್ಲಲೇಬೇಕೆಂಬ ನಿಂತುಮವಿಲ್ಲ. ಅಪವಾದಗಳು ಕಡಿಮೆ ಎಂದು ಹೇಳಲು ಸಾಧ್ಯವಿಲ್ಲ.

ರಾಮಣ್ಣ ರೈ ಅವರು ಹೇಳುವಂತೆ 'ಕೋಳಿಗಳಿಗೆ ತಿಥಿ, ವಾರ, ಪಕ್ಷಗಳಿಗಿಂತ ಮುಖ್ಯವಾಗಿ ಅವುಗಳ ಸೋಲು – ಗೆಲುವೇ ಪ್ರಧಾನ ಪಾತ್ರ ವಹಿಸುತ್ತದೆಂತೇ ವಿನಹ: ಪಂಚಾಂಗದಲ್ಲಿ ತಿಳಿಸಿದ ಅಂಶಗಳಲ್ಲ. ಪಂಚಾಂಗ ಜನರ ತೃಪ್ತಿಗಾಗಿ ಮಾತ್ರ ರೂಪಿತವಾದದ್ದು. ಕೋಳಿಗಳ ಒಂದು ಗರಿಂತು ಬಣ್ಣ ವ್ಯತ್ಯಾಸವಿದ್ದರು ಆ ಕೋಳಿ ಸೋತು ಹೋಗಬಹುದು. (ರಾಮಣ್ಣ ರೈ ಅವರು ತಮ್ಮ 50 ವರ್ಷಗಳ ಕೋಳಿ ಅಂಕದ ಅನುಭವದಿಂದ ತಂತಾರಿಸಿದ ಪಂಚಾಂಗವನ್ನು ಅನುಬಂಧ 1.2ರಲ್ಲಿ ನೀಡಲಾಗಿದೆ.)

ಪ್ರತಿಯೊಬ್ಬರು : ಕೋಳಿಅಂಕದಲ್ಲಿ ಗೆಲ್ಲಬೇಕೆಂದು ಉತ್ಸಾಹದಿಂದ ಬರುವವರು. ಆದುದರಿಂದ ಪಂಚಾಂಗವನ್ನು ಗಮನಿಸಿಯೇ ಮನೆಯಿಂದ ಹೊರಡುತ್ತಾರೆ. ಹಾಗಾಗಿ ಪಂಚಾಂಗ ಕೋಳಿಅಂಕಕ್ಕೆ ಹೋಗುವವರಿಗೆ ಅವಶ್ಯವಾಗಿದೆ.

4.2.5: ಜೂಜಿನ ವಿವರ: ಹಿಂದಿನ ಕಾಲದಲ್ಲಿ ಕೋಳಿಅಂಕ ಮನರಂಜನೆ, ಪ್ರತಿಷ್ಠೆಗಳಿಗಾಗಿ ನಡೆಯುತ್ತಿತ್ತು. ಪಣವಿಟ್ಟು ಕೋಳಿಗಳನ್ನು ಕಾಳಗಕ್ಕೆ ಬಿಡುತ್ತಿರಲಿಲ್ಲವಂತೆ ಬರಬರುತ್ತ ಪಣ ಒಡ್ಡಿ ಕೋಳಿಗಳನ್ನು ಕಾಳಗ ಮಾಡಿಸುವ ಹಂತಕ್ಕೆ ಬಂದು ಮುಟ್ಟಿತು ಎಂದು ನಿರೂಪಕರು ಅಭಿಪ್ರಾಯ ಪಡುತ್ತಾರೆ. ಕೋಳಿ ಅಂಕ ಎಂಬುದು ಕೋಳಿ ಜೂಜು ಎಂಬ ಹೆಸರಿಗೆ ಕಾರಣವಾಯಿತು. ಇಲ್ಲಿ ಮನುಷ್ಯ ಕೋಳಿಗಳ ಜೀವಹರಣ ಮಾಡಿ ತಾನು ಹಣ ಗಳಿಸುತ್ತಾನೆ. ಆದರೆ ಹಿಂದಿನ ಕಾಲದಲ್ಲಿ ಪಣಗಳಿರಲಿಲ್ಲ ಎಂದು ಒಪ್ಪುವುದು ಕಷ್ಟ. ಇಂದು ಹಣವನ್ನು ಜೂಜಿನಲ್ಲಿ ಬಳಸಿದರೆ ಹಿಂದೆ ಆಸ್ತಿ, ರಾಜ್ಯ, ಬೊಕ್ಕಸಗಳನ್ನು ಪಣವಾಗಿ ಒಡ್ಡಿ ಆಟವಾಡುತ್ತಿದ್ದ ಬಗೆಗೆ ಅನೇಕ ಉಲ್ಲೇಖಗಳು ದೊರೆಯುತ್ತವೆ. ಇದರಿಂದಾಗಿ ಕೋಳಿಅಂಕದಲ್ಲೂ ಪಣ ಕಟ್ಟುತ್ತಿದ್ದಿರಬಹುದು ಎಂದು ಹೇಳಬಹುದು.

ಜೂಜು ಕೋಳಿಗಳನ್ನು ಕಾಳಗಕ್ಕೆ ಎತ್ತುವ ಮೊದಲು ನಿರ್ಧಾರವಾಗುತ್ತದೆ. ಜೂಜಿನ ನಿರ್ಧಾರವಾಗದೆ ಕೋಳಿಗಳನ್ನು ಕಾಳಗಕ್ಕೆ ಬಿಡಲು ಕೋಳಿಗಳ ಯಜಮಾನರುಗಳು ಒಪ್ಪುವುದಿಲ್ಲ. ಜೂಜಿನಲ್ಲಿ ಇಬ್ಬರಲ್ಲೂ ಚರ್ಚೆ ಬಂದು ಸರಿ ಬಾರದೆ ಹೋದಾಗ ಕಾಳಗಕ್ಕೆ ನಿರ್ಧರಿಸಿದ ಕೋಳಿಗಳು ಪತಿಯನ್ನು ಕಳೆದುಕೊಳ್ಳುತ್ತದೆ. ಮತ್ತೊಂದು ಪತಿಯ ಹುಡುಕಾಟ ಅಲ್ಲಿ ನಡೆಯುತ್ತದೆ. ಕಾಳಗ ನಡೆಯುವಾಗ ಕೋಳಿಗಳ ಯಜಮಾನರುಗಳು ಮಾತ್ರವಲ್ಲದೆ ಉಳಿದ ಪ್ರೇಕ್ಷಕರು ತಮ್ಮ ತಮ್ಮೊಳಗೆ ಜೂಜು ಕಟ್ಟಿಕೊಂಡಿರುವುದನ್ನು ಕಾಣಬಹುದು. ಕೋಳಿಗಳ ಕಾಳಗ ಆರಂಭವಾದಾಗ ಸಮಕ್ಕೆ (ಸರಿಯಾಗಿ ಅಥವಾ ರೂಪಾಯಿಗೆ) ಕಮ್ಮಿಗೆ (ಕಡಿಮೆಗೆ) ಏಳಿಟ್ (ಏಳರಲ್ಲಿ) ಎಂಬು ಜನ ಬೊಬ್ಬೆ ಹಾಕುತ್ತಿರುವುದನ್ನು ಕಾಣಬಹುದು. ಈಗ ಅವರಿಗೆ ಯಾರಾದರೊಬ್ಬರು ಪಣ ಕಟ್ಟಬೇಕು. ಕೋಳಿ ಗೆದ್ದರೆ ರೂಪಾಯಿಗೆ ಎಂದರೆ ಒಂದು ರೂಪಾಯಿಗೆ

ಒಂದು ರೂಪಾಯಿ ಕೊಡಬೇಕು. ಉದಾಹರಣೆಗೆ ಒಬ್ಬ ಒಂದು ಕೋಳಿ ಗೆಲ್ಲುತ್ತದೆ ಎಂದು ಸೂಚಿಸಿ ಏಟ್ ಎಂದು ಹೇಳುತ್ತಾನೆ. ಅದಕ್ಕೆ ಮತ್ತೊಬ್ಬ ಒಪ್ಪಿ ಕೊಳ್ಳುತ್ತಾನೆ. ಕೊನೆಯಲ್ಲಿ ಮತ್ತೊಬ್ಬ ಹೇಳಿದ ಕೋಳಿ ಗೆದ್ದರೆ ಅತ ಒಂದು ರೂಪಾಯಿ ಕೊಡಬೇಕು, ಸೋತರೆ ಈತ ಎಪ್ಪತ್ತು ಪೈಸೆ ಕೊಟ್ಟರೆ ಸಾಕು. ಹೀಗೆ ಸಾವಿರ, ಲಕ್ಷಗಳಲ್ಲೂ ನಡೆಯುತ್ತದೆ. ಅರವತ್ತರಲ್ಲಿ ಐವತ್ತರಲ್ಲಿ ನಲವತ್ತರಲ್ಲಿಯೂ ಜನ ಜೂಜು ಕಟ್ಟುವುದನ್ನು ಕಾಣಬಹುದು. ನಲವತ್ತರಲ್ಲಿ ಹಣದ ಅಗತ್ಯ ಅತಿ ಇದ್ದವರು ಮಾತ್ರ ಕಟ್ಟುತ್ತಾರೆ.

ಈ ರೀತಿಯಲ್ಲಿ ಜೂಜು ಹೆಚ್ಚು ಕಡಿಮೆ ಆಗುತ್ತಿರುತ್ತದೆ. ಅಂಕದ ಕಳದಲ್ಲಿ ಜೂಜು ಕಟ್ಟುವ ಜನರನ್ನು ನೋಡುವುದೇ ಒಂದು ಸಂತಸದ ವಿಷಯವಾಗುತ್ತದೆ.

4.2.6: ಅಂಕಗಳ ವಿಧಗಳು: 'ಕೋಳಿನ ಕಟ್ಟ' ಎಂದು ಹೇಳಿದಾಗ ಎರಡು ಹುಂಜಗಳು ಜಗಳ ಆಡುವುದು ಎಂದು ವ್ಯಾಖ್ಯಾನ ಬರೆದು ಸುಮ್ಮನಾಗುತ್ತೇವೆ. ಆದರೆ ಕೋಳಿದ ಕಟ್ಟವನ್ನು ಅತಿ ಹತ್ತಿರದಿಂದ ಗಮನಿಸಿದಾಗ ಅಂಕಗಳಲ್ಲಿ ಇರುವ ವಿಧಗಳು ಕಂಡು ಬರುತ್ತದೆ. ಅವುಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

1. ಒಂಟಿಗೆ ಕಟ್ಟುವುದು
2. ಒಟ್ಟೆಪಾಲು ಅಥವಾ ಸಾಲುಕೋರಿ
3. ಓಡಿಕಟ್ಟ
4. ಪಾರ್ಟಿಕಟ್ಟ
5. ಕದಿಕೆ ಕಟ್ಟ

4.2.6.1: ಒಂಟಿಗೆ ಅಥವಾ ಒತ್ತೆ ಕಟ್ಟುವುದು: ಒಂಟಿ ಅಥವಾ ಒತ್ತೆ ಎಂದರೆ ಒಂದು ಎಂದು ಅರ್ಥ. ಇಲ್ಲಿ ಒಂದು ಜೊತೆ ಕೋಳಿಗಳನ್ನು ಮಾತ್ರ ಕಟ್ಟಲಾಗುತ್ತದೆ. ಉದಾಹರಣೆ ಒಬ್ಬರಲ್ಲಿ ಒಂದು ಕೋಳಿ ಮತ್ತೊಬ್ಬರಲ್ಲಿ ಒಂದು ಕೋಳಿ ಮಾತ್ರ ಇದ್ದರೆ ಈ ರೀತಿಯಲ್ಲಿ ಒತ್ತೆ ಕಟ್ಟಲಾಗುತ್ತದೆ. ಕೋಳಿಗಳನ್ನು ಕಟ್ಟುವಾಗ ನಿಯಮಗಳನ್ನು ಕೋಳಿಗಳ ಯಜಮಾನರುಗಳು ರೂಪಿಸಿ ಕೊಳ್ಳುತ್ತಾರೆ.

ಒತ್ತೆ ಬಾಳು ಮಾತ್ರ ಎಂಬ ನಿಯಮ ಇದ್ದರೆ ಕಟ್ಟಿದ ಬಾಳನ್ನು ಬಿಚ್ಚುವಂತಿಲ್ಲ. 'ಒಟ್ಟೆ' 'ಬಂಟ' ಆದ ಮೇಲೆಯೇ ಬಿಚ್ಚಬೇಕು. ಅಂಕದ ಮಧ್ಯೆ ಬಾಳು ಮುರಿದು ಹೋದರೆ ಬದಲಾಯಿಸಲು ಅನುಮತಿ ಇದೆ. ಇತರ ಯಾವ ಸಂದರ್ಭದಲ್ಲೂ ಯಾವ ಕಾರಣಕ್ಕೂ ಬಾಳನ್ನು ಬದಲಾಯಿಸುವಂತಿಲ್ಲ.

''ಒಟೆ'' ಎಂದರೆ ಅಂಕದಲ್ಲಿ ಸೋತ ಅಥವ ಸತ್ತ ಕೋಳಿ. ಬಂಟ ಎಂದರೆ ಕಾಳಗದಲ್ಲಿ ಗೆದ್ದ ಕೋಳಿ. 'ಒಟ್ಟೆ' ಎಂದರೆ ತೂತು ರಂಧ್ರ ಎಂಬ ಅರ್ಥ ರಂಧ್ರದ ಮೂಲಕ ಕೋಳಿಯ ರಕ್ತ ಹೋಗಿ ಕೋಳಿ ಸತ್ತಿದೆ ಎಂಬ ಕಾರಣದಿಂದ ಒಟ್ಟೆ ಎಂಬ ಅರ್ಥ ಬಂದಿರಬಹುದು. 'ಬಂಟ' ಎಂದರೆ ಶೂರ, ಯೋಧ ಎಂಬ ಅರ್ಥಗಳಿರುವುದರಿಂದ ಗೆದ್ದ ಕೋಳಿಯನ್ನು ಬಂಟ ಎಂಬ ಹೆಸರಿನಿಂದ ಕರೆದಿರಲು ಬಹುದು.

<u>4.2.4.2: ಒಟ್ಟೆ ಪಾಲು ಅಥವಾ ಸಾಲು ಕೋರಿ</u> : ಒಟೆ ಪಾಲು ಎಂದರೆ ಸೋತ ಕೋಳಿಗಳನ್ನು ಸಮಪಾಲು ಮಾಡಿಕೊಳ್ಳುವುದು ಎಂಬ ಅರ್ಥದಲ್ಲಿ ಆ ಹೆಸರು ಬಂದಿದೆ. ಉದಾಹರಣೆಗೆ ಒಬ್ಬನಲ್ಲಿ ಮೂವತ್ತು ಕೋಳಿಗಳು ಮತ್ತೊಬ್ಬರಲ್ಲಿ ಮೂವತ್ತು ಕೋಳಿಗಳು ಇದ್ದರೆ ಆ ಎರಡು ವ್ಯಕ್ತಿಗಳು ಒಟೆ ಪಾಲಿಗೆ ಕಟ್ಟುವ ಎಂದು ಒಪ್ಪಂದ ಮಾಡಿಕೊಳ್ಳಬಹುದು. ಮೂವತ್ತು ಕೋಳಿಗಳಿಗೆ ಸರಿಯಾದ ಪತಿ ಮಾಡಿ ಒಂದೊಂದೆ ಜೋಡಿ ಕೋಳಿಗಳನ್ನು ಕಾಳಗಕ್ಕೆ ಬಿಡುತ್ತಾರೆ. ಹೀಗೆ ಮೂವತ್ತು ಕೋಳಿಗಳು ಒಂದಾದ ಮೇಲೆ ಒಂದು ಬರುವುದರಿಂದ ಇದನ್ನು ಸಾಲು ಕೋರಿ ಎಂದೂ ಕರೆಯುತ್ತಾರೆ. ಅಂಕದ ಕೊನೆಯಲ್ಲಿ ಸೋತ ಕೋಳಿಗಳನ್ನು ಇಬ್ಬರೂ ಸಮಪಾಲು ಮಾಡಿಕೊಳ್ಳುತ್ತಾರೆ. ಕಾಳಗದ ನಂತರ ಗೆದ್ದ ಕೋಳಿ ಯಜಮಾನನ ಮನೆ ಸೇರುತ್ತದೆ. ಅದರಲ್ಲಿ ಪಾಲು ಇಲ್ಲ.

ಹೀಗೆ ನಡೆಯುವ ಅಂಕದಲ್ಲೂ ಜೂಜು ಕಟ್ಟುತ್ತಾರೆ.

ಈ ಅಂಕದಲ್ಲಿ ಇಬ್ಬರೂ ಯಜಮಾನರುಗಳು ನಿರ್ದಿಷ್ಟ ನಿಯಮಗಳನ್ನು ಮಾಡಿಕೊಂಡಿರುತ್ತಾರೆ. ಈ ರೀತಿ ನಡೆಯುವ ಕಾಳಗದಲ್ಲಿ 'ಒಟ್ಟೆ' ಬಂಟ

ಆಗುವುದು ಮುಖ್ಯವಾಗಿರುವ ಕಾರಣ ನಿಯಮಗಳು ಬಹಳ ನಿಷ್ಠುರವಾಗಿರುತ್ತದೆ. ನಿಯಮವು ತಪ್ಪಿದರೂ ಜಗಳಕ್ಕೆ ಕಾರಣವಾಗುತ್ತದೆ.

ಕೆಲವು ನಿರ್ಧರಿಸುವ ನಿಯಮಗಳು ಈ ರೀತಿ ಇದೆ.

ಗಾಳಿ ಮತ್ತು ನೀರು ಕುಡಿಸುವುದನ್ನು ಬಿಟ್ಟು ಹಿಂದಿನಿಂದ ನೀರು ಹಿಡಿಯುವಂತಿಲ್ಲ, ಗಾಯಕ್ಕೆ ಮದ್ದು ಹಾಕುವಂತಿಲ್ಲ. ಪುನ: ಪುನ: ಕೋಳಿಗಳನ್ನು ಒಡ್ಡಿಸುವಂತಿಲ್ಲ. ಒಡ್ಡಿಸುವುದು ಎಂದರೆ ಕೋಳಿಗಳಿಗೆ ಗರ್ವ ಬರಲು ಎದುರು ಎದುರು ಕೋಳಿಗಳನ್ನು ತಂದು ಹಿಂತೆಗೆಯುವುದು. ಕಾಲು ಮುರಿದ ಕೋಳಿಯನ್ನು ಅಂಕದ ಕಲದಿಂದ ತೆಗೆಯಬೇಕು.

ಈ 'ರೀತಿಯಲ್ಲಿ ನಿಯಮಗಳಿರುತ್ತವೆ.

<u>4.2.6.3. ಓಡಿಕಟ್ಟು</u> : ಓಡಿ ಎಂಬ ಪದ ಓಡಿ ಹೋಗುವುದನ್ನು ಸೂಚಿಸುತ್ತದೆ. ಇಲ್ಲಿ ಜೊತೆ ಕೋಳಿಗಳನ್ನು ಕಾಳಗ ಮಾಡಿಸಲಾಗುತ್ತದೆ. ಹೀಗೆ ನಡೆಯುವ ಕಾಳಗದಲ್ಲಿ ಯಾವುದಾದರೂ ಒಂದು ಕೋಳಿ ಸತ್ತು ಹೋದರೆ ಮಾತ್ರ ಗೆದ್ದ ಕೋಳಿಯ ಯಜಮಾನನ ಕೈ ಸೇರುವುದು. ಸಾಯದೆ ಅಂಕದ ಕಲದಿಂದ ಓಡಿ ಹೋದರೆ ಆ ಕೋಳಿ ಅದರ ಯಜಮಾನನಿಗೆ ಸೇರುತ್ತದೆ. ಇದರಿಂದ ಕೋಳಿ ಓಡಿ ತಪ್ಪಿಸುವುದು ಓಡಿ ಕಟ್ಟು ಎಂದು ಆಗಿರಬಹುದು. ಇಲ್ಲಿ ಕೋಳಿಗಳ ಬಣ್ಣಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇದ್ದಂತೆ ಕಾಣುವುದಿಲ್ಲ ಯಾವ ಕೋಳಿಯನ್ನು ಬಳಸಬಹುದು. ಆದರೆ ಜೊತೆ ಅಥವ ಪತಿಯಲ್ಲಿ ಸುಮಾರಾಗಿ ಸರಿಯಾಗಿರಬೇಕು. ಈ ರೀತಿಯ ಅಂಕಗಳು ಈಚೆಯ ದಿನಗಳಲ್ಲಿ ಕಡಿಮೆಯಾಗಿದೆ. ಯಾಕೆಂದರೆ ಎದುರಾಳಿ ಇದರಿಂದ ಸಾಕಷ್ಟು ನಷ್ಟ ಅನುಭವಿಸುತ್ತಾನೆ. ಕೋಳಿ ತನಗೆ ಸಿಗುತ್ತದೆ ಎಂಬ ಧೈರ್ಯದಿಂದ ಇಲ್ಲಿ ಕಾಳಗ ಮಾಡಿಸುವಂತಿಲ್ಲ. ಎಷ್ಟು ಹೊತ್ತಿಗೂ ಯಾವ ಕೋಳಿಯು ಅಂಕದ ಕಲ ಬಿಡಬಹುದು. ಈ ಕಾರಣದಿಂದ ಈ ರೀತಿಯ ಅಂಕಗಳು ಮಾಯ ಆಗುತ್ತಿದೆ.

4.2.6.4: ಪಾರ್ಟಿಕಟ್ಟು: ಪಾರ್ಟಿ ಎಂದರೆ ಗುಂಪು ಎಂಬ ಅರ್ಥ. ಪಾರ್ಟಿ ಕಟ್ಟದಲ್ಲಿ ಎರಡು ಗುಂಪುಗಳಿರುತ್ತದೆ. ಒಂದು ಅಂಕವನ್ನು ರೂಪಿಸುವ ಗುಂಪು ಇನ್ನೊಂದು ಅದಕ್ಕೆ ಪತಿ ಮತ್ತು ಜೂಜು ನೀಡಿ ಆ ಗುಂಪಿಗೆ ಪಂಥ ಒಡ್ಡುವ ಗುಂಪು. ಇದು ಈಚೆಗಿನ ವರ್ಷಗಳಲ್ಲಿ ಆರಂಭವಾದದ್ದು. ಇದನ್ನು ಶರಾಬು ಅಂಗಡಿಯ ಮಾಲಕರು ಹೆಚ್ಚಾಗಿ ನಡೆಸುತ್ತಾರೆ. ಇಲ್ಲಿ ಒಂದು ''ಗೂಂಟದ ಕೋಳಿ'' ಎಂದಿದೆ. ಆ ಕೋಳಿಯೊಂದಿಗೆ ಜೂಜು ಮತ್ತು ಪತಿ ನೀಡಿ ಆ ಕೋಳಿಯನ್ನು ಗೆದ್ದರೆ ಬಹುಮಾನ ನೀಡುತ್ತಾರೆ. ಅದರ ಮೊದಲು ಮೂರು ಕೋಳಿಗಳನ್ನು ಕಾಳಗಕ್ಕೆ ಬಳಸುತ್ತಿದ್ದರು. ಈಗ ಐದು ಕೋಳಿಗಳನ್ನು ಬಳಸುತ್ತಾರೆ.

ಒಂದು ಗುಂಪು ತಂದ ಮೂರು ಕೋಳಿಗಳಿಗೆ ಎದುರು ಗುಂಪು ಪತಿ ಕೊಡಬೇಕು. ಮೊದಲು ಎರಡು ಕೋಳಿಗೆ ಪತಿ ನಡೆಯುತ್ತದೆ. ಆಮೇಲೆ ನಿಗದಿತ ಜೂಜಿನಲ್ಲಿ ಕಾಳಗ ಆರಂಭವಾಗುತ್ತದೆ. ಈ ಕಾಳಗದಲ್ಲಿ ಎರಡು ಕೋಳಿಗಳನ್ನು ಗೆದ್ದ ಗುಂಪಿಗೆ ಪಾರ್ಟಿ ಆಯಿತು ಎಂದು ಹೇಳುತ್ತಾರೆ. ಎರಡು ಕೋಳಿಗಳನ್ನು ಒಮ್ಮೆಲೇ ಒಂದು ಪಾರ್ಟಿ ಗೆದ್ದುಕೊಂಡರೆ ಕೊನೆಯ ಕೋಳಿಯನ್ನು ಕಾಳಗ ಮಾಡಿಸಲುಬಹುದು. ಕಾಳಗ ಮಾಡಿಸದೆ ಇರಲು ಬಹುದು. ಅದು ಗುಂಪಿನ ಇಚ್ಛೆಗೆ ಅವಲಂಬಿಸಿದ್ದು. ಅದೇ ರೀತಿ ಐದು ಕೋಳಿಗಳಲ್ಲೂ ನಡೆಯುತ್ತದೆ. ಇಲ್ಲಿ ಮೂರು ಕೋಳಿಗಳನ್ನು ಗೆಲ್ಲಬೇಕು.

ಪಾರ್ಟಿಕಟ್ಟದಲ್ಲಿ ಜೂಜು ಕೆಲವು ಲಕ್ಷಗಳವರೆಗೂ ಇರುತ್ತದೆ. ಜೂಜಿನಲ್ಲಿ ಹಲವು ಜನರು ಪಾಲು ಹೊಂದಿರುತ್ತಾರೆ. ಮುಖ್ಯ ವ್ಯಕ್ತಿ ಅಥವಾ ಮುಂದಾಳು ತನಗೆ ಬೇಕಾದಷ್ಟು ಜೂಜಿನ ಪಾಲನ್ನು ಇಟ್ಟುಕೊಂಡು ಉಳಿದ ಭಾಗವನ್ನು ಇತರರಿಗೆ ಬಿಡುತ್ತಾನೆ. ಇದರಲ್ಲಿ ಸೋತ ಗುಂಪು ಗೆದ್ದ ಗುಂಪಿಗೆ ನಿಗದಿತ ಜೂಜಿನ ಹಣ ಕೊಡಬೇಕು. ಆ ಹಣವನ್ನು ಪಾಲು ಹಾಕಿದ ಪ್ರಕಾರ ಹಂಚಿಕೊಳ್ಳುತ್ತಾರೆ.

ಈ ರೀತಿಯ ಅಂಕಗಳಲ್ಲಿ ಬಹುಮಾನಗಳನ್ನು ಕೊಡುತ್ತಾರೆ. ಇದು ಈಚಿನ

ದಿನಗಳಲ್ಲಿ ಶರಾಬು ಅಂಗಡಿಯವರು, ಶ್ರೀಮಂತರು ನಡೆಸುವುದನ್ನು ಕಾಣಬಹುದು.

4.2.6.5: ಕದಿಕೆ ಕಟ್ಟು: ಇದು ಒಂದು ರೀತಿಯ ವಿಚಿತ್ರ ಸಂತೋಷ ಪಡುವ ಅಂಕ. ಕದಿಕೆ ಅಂದರೆ ಕಣಜ. ಕಣಜವನ್ನು ಅಂಕಕ್ಕಾಗಿಯೇ ರಚಿಸಲಾಗುತ್ತದೆ. ಆ ಕಣಜವನ್ನು ಸುತ್ತಲೂ ಮುಚ್ಚಲಾಗಿ ಮೇಲಿನ ಭಾಗವಮಾತ್ರ ತೆರೆದಿರುತ್ತದೆ. ಈ ಕಣಜದೊಳಗೆ ಮೂರು ಕೋಳಿಗಳನ್ನು ಮೂರು ಭಾಗದಿಂದ ಕಾಲಿಗೆ ಬಾಳು ಕಟ್ಟಿ ಬಿಡಲಾಗುತ್ತದೆ. ಕೆಲವು ಪ್ರದೇಶದಲ್ಲಿ ಐದು, ಏಳು ಕೋಳಿಗಳನ್ನು ಬಿಡುವುದೂ ಇದೆ. ಹೀಗೆ ಬಿಟ್ಟ ಕೋಳಿಗಳು ಕಾಳಗ ನಡೆಸಲು ಆರಂಭಿಸುತ್ತವೆ. ಕಾಳಗದಲ್ಲಿ ಎರಡು ಕೋಳಿಗಳು ಸತ್ತು ಒಂದು ಕೋಳಿ ಮಾತ್ರ ಉಳಿಯುತ್ತದೆ. ನಿರೂಪಕರುಗಳ ಅನುಭವದಲ್ಲಿ ಮೂರು ಕೋಳಿಗಳೂ ಸತ್ತ ಇತಿಹಾಸ ಇಲ್ಲ. ಉಳಿದ ಒಂದು ಕೋಳಿ ಗೆದ್ದಿದೆ ಎಂದು ಒಪ್ಪುತ್ತಾರೆ. ಬದುಕಿ ಉಳಿದ ಕೋಳಿ ಕಾಳಗ ಮಾಡದೆ ಒಂದು ಮೂಲೆಯಲ್ಲಿ ಕುಳಿತಿದ್ದಿರಬಹುದು ಅಥವಾ ಕಾಳಗದಲ್ಲಿ ಎರಡು ಕೋಳಿಗಳನ್ನೂ ಕೊಂದಿರಬಹುದು. ಇಲ್ಲಿ ಹೇಗೂ ಊಹಿಸಬಹುದು. ಗೆದ್ದ ಕೋಳಿಯ ಯಜಮಾನನಿಗೆ ಸತ್ತ ಎರಡು ಕೋಳಿಗಳು ಸೇರುತ್ತವೆ. ಇದರಲ್ಲೂ ಜೂಜು ಕಟ್ಟುವ ಕ್ರಮ ಇದೆ. ಜೂಜಿನ ಹಣ ಕೂಡ ಗೆದ್ದ ಕೋಳಿಯ ಯಜಮಾನನಿಗೆ ಸೇರುತ್ತದೆ.

4.2.7: ಕೋಳಿ ಅಂಕಕ್ಕೆ ಹೋಗುವಾಗಿನ ನಂಬಿಕೆಗಳು: ಕೋಳಿಅಂಕಕ್ಕೆ ಜನ ಹೋಗುವಾಗ ಕೆಲವು ನಂಬಿಕೆಗಳನ್ನಿಟ್ಟುಕೊಂಡಿರುತ್ತಾರೆ. ಅವುಗಳು ವಿರುದ್ಧವಾದಾಗ ಅಂಕಕ್ಕೆ ಜನ ಹೋಗುವುದಿಲ್ಲ.

ಕುಕ್ಕುಟ ಪಂಚಾಂಗವನ್ನು ನೋಡಿ ಅಂಕಕ್ಕೆ ಹೋಗುವಾಗ ದಾರಿಯಲ್ಲಿ ಮಾಂಸ ಸಿಕ್ಕಿದರೆ ಶುಭ ಎಂದು ನಂಬುತ್ತಾರೆ. ಮನೆಯಿಂದ ಕೋಳಿಯನ್ನು ಹಿಡಿದುಕೊಂಡು ಹೊರಡುವಾಗ ಖುಷಿಯಿಂದ ಹೊರಡಬೇಕು. ಹೆಂಡತಿ ಮಕ್ಕಳಲ್ಲಿ ಜಗಳ ಮಾಡಿ ಹೊರಡಬಾರದು. ಒಂದುವೇಳೆ ಜಗಳವಾಡಿ ಹೋದರೆ ಅಪಾಯ ಬರುವುದು ಎಂದು ನಂಬುತ್ತಾರೆ.

ಬೆಕ್ಕು, ಕಟ್ಟಿಗೆ, ಹೊಸ ಮಣ್ಣಿನ ಮಡಿಕೆ, ಒಂಟಿ ಬ್ರಾಹ್ಮಣ ತಲೆಗೆ ಮುಂಡಾಸು ಕಟ್ಟದೆ ಸಿಕ್ಕಿದರೆ, ವಿಧವೆ ಸಿಕ್ಕಿದರೆ ಅಂದು ಕೋಳಿಅಂಕದಲ್ಲಿ ಸೋಲು ಎಂದು ತಿಳಿಯುತ್ತಾರೆ. ಹೀಗೆ ಆದರೆ ಕೆಲವರು ಹಿಂತಿರುಗಿ ಮನೆಗೆ ಬರುವುದೂ ಇದೆ. ಅಂಕಕ್ಕೆ ಹೊರಟು ಪುನಃ ತಿರುಗಿ ಮನೆಗೆ ಬರಬಾರದು ಹಾಗೆ ಬಂದರೆ ಸೋಲು ಎಂದು ನಂಬುತ್ತಾರೆ.

ನರಿ, ಮುಂಗುಸಿ, ಕೇರೆ ಹಾವು ಕಂಡರೆ ಅಂದು ಗೆಲುವು ಎಂಬ ನಂಬಿಕೆ ಇದೆ. ಹಸಿರು ಹಾವನ್ನು ತಲೆಗೆ ಸುತ್ತಿಕೊಂಡು ಹೋದರೆ ಅಂಕಕ್ಕೆ ಉತ್ತಮ ಎಂಬ ನಂಬಿಕೆ ಇದೆ.

ಆದರೆ ಇದು ಯಾವುದನ್ನೂ ನಂಬದೆ ಅಂಕಕ್ಕೆ ಹೋಗುವ ಜನ ಕಡಿಮೆ ಏನಲ್ಲ. ಕೆಲವು ಅನುಭವಿಗಳು ಇದನ್ನು ನಂಬದೆ ಕೋಳಿಗಳಿಗೆ ಇರುವ ಶಕ್ತಿ ಸಾಮರ್ಥ್ಯವೇ ಗೆಲುವು ಸೋಲಿಗೆ ಕಾರಣವೇ ಹೊರತು ಯಾವ ಶಕುನವೂ ಅಲ್ಲ ಎನ್ನುವವರು ಇದ್ದಾರೆ.

4.2.8: ವಿಶೇಷ ಸಂದರ್ಭದ ಕೋಳಿಅಂಕಗಳು: ಕೋಳಿಅಂಕಗಳು ಜಾತ್ರೆ, ಕಂಬುಲ, ನೇಮಗಳ ಸಮಯದಲ್ಲಿ ಮಾತ್ರವಲ್ಲದೆ ಸೀಮಂತ, ಸಂಮಾನಗಳ ಸಮಯದಲ್ಲೂ ನಡೆಯುತ್ತದೆ. ವಿಶೇಷ ಸಂದರ್ಭದಲ್ಲಿ ನೆಂಟರುಗಳಿಗೆ ಊಟ ತಯಾರಿಸುತ್ತಾರೆ. ಆಗ ಸಮಾರಂಭ ನಡೆಸುವ ವ್ಯಕ್ತಿ ತಮ್ಮ ಮನೆಯಿಂದಲೇ ಕೋಳಿಗಳನ್ನು ಉಪಯೋಗಿಸುವುದು ಕಷ್ಟ. ಅದಕ್ಕಾಗಿ ಗ್ರಾಮದ ಜನ ಅವನಿಗೆ ಸಹಾಯವಾಗುತ್ತಾರೆ. ತಮ್ಮ ಮನೆಯಲ್ಲಿದ್ದ ಕೋಳಿಗಳನ್ನು ತಂದು ಕಾರ್ಯಕ್ರಮ ನಡೆಯುವ ಮನೆಗೆ ಹಾಗೆ ಕೊಡುವ ಬದಲು ಕಾಳಗ ನಡೆಸಿ ಅದರಲ್ಲಿ ಸತ್ತ ಕೋಳಿಯನ್ನು ಆ ಮನೆಗೆ ಕೊಡುತ್ತಾರೆ. ಇದು ಹಳ್ಳಿಗಳಲ್ಲಿ ಹೆಚ್ಚಾಗಿ ನಡೆಯುತ್ತದೆ. ಇಲ್ಲಿ ಗೆದ್ದ ಕೋಳಿಗಳನ್ನು ತನ್ನ ಮನೆಗೆ ಕೊಂಡು ಹೋಗುತ್ತಾರೆ. ಸತ್ತ ಕೋಳಿಗಳು ಸಮಾರಂಭದ ಮನೆಗೆ ಸೇರುತ್ತವೆ. ಇದು ಒಬ್ಬನಿಗೆ ಹೊರೆ ಬೀಳದಂತೆ ಸಹಕರಿಸುವ ರೀತಿಯಾಗಿದೆ. ಬೇರೆಯವರ ಮನೆಯ ಕಾರ್ಯಕ್ರಮಕ್ಕೆ ಈತ ಸಹಾಯವಾಗುತ್ತಾನೆ. ಇಲ್ಲಿ ಸಂತೋಷಕ್ಕಾಗಿ ಅಂಕ ನಡೆಸುತ್ತಾರೆ.

ಜೂಜು ಇಲ್ಲಿ ನಡೆಯುವುದು ವಿರಳ. ಈ ರೀತಿಯಲ್ಲಿ ನಡೆಯುವ ಕೋಳಿಅಂಕದಲ್ಲಿ ವಿಶೇಷ ನಿಯಮಗಳಿರುವುದಿಲ್ಲ. ಇದು ಸಹಕಾರಕ್ಕಾಗಿ ನಡೆಯುವ ಕೋಳಿ ಅಂಕವಾಗಿದೆ. ಸೀಮಂತದ ಸಮಯದಲ್ಲಿ ನಡೆಯುವ ಅಂಕವನ್ನು 'ಬಯಕೆದ ಕಟ್ಟ' ಎಂದು ಕರೆಯುತ್ತಾರೆ. ಬೇರೆ ಸಮಾರಂಭದ ಸಮಯದಲ್ಲೂ ಈ ರೀತಿಯ ಅಂಕಗಳು ನಡೆಯುತ್ತದೆ.

<u>ಅಡ್ಯೆದ ಕಟ್ಟ</u>: ಬಂಟ್ವಾಳ ತಾಲೂಕಿನ ಕಲ್ಲಡ್ಕ ಎಂಬಲ್ಲಿ ಹಿಂದೆ 'ಅಡ್ಯೆದ ಕಟ್ಟ' ('ಅಡ್ಯೆ' ಎಂದರೆ ಒಂದು ವಿಶಿಷ್ಟ ಬಗೆಯ ತಿಂಡಿ) ಎಂಬ ಹೆಸರಿನಲ್ಲಿ ಕೋಳಿ ಅಂಕ ನಡೆಯುತ್ತಿತ್ತೆಂದು ನಿರೂಪಕರು ಹೇಳುತ್ತಾರೆ. ಈ ಅಂಕವನ್ನು ಸಾಗುವಳಿ ಮುಗಿದ ನಂತರದ ವಿಶ್ರಾಂತಿ ಸಮಯದಲ್ಲಿ ರೈತರು ನಡೆಸುತ್ತಿದ್ದರಂತೆ. ಕೃಷಿಯ ಕೆಲಸಗಳಿಂದಾದ ಆಯಾಸವನ್ನು ಈ ರೀತಿಯ ಅಂಕ ನಡೆಸುವ ಮೂಲಕ ಪರಿಹರಿಸುತ್ತಿದ್ದರೆಂದು ತಿಳಿಯಬಹುದು. 'ಅಡ್ಯೆದ ಕಟ್ಟ'ದ ಸಂದರ್ಭದಲ್ಲಿ ಹಲಸಿನ ಹಣ್ಣಿನಿಂದ ತಯಾರಿಸಿದ ಒಂದು ವಿಶೇಷ ತಿಂಡಿಯೊಂದಿಗೆ ಅಂಕದಲ್ಲಿ ಸಿಕ್ಕಿದ ಕೋಳಿಯನ್ನು ಸಾಂಬಾರು ಮಾಡಿ ತಿನ್ನುತ್ತಿದ್ದರಂತೆ. ಮಳೆಗಾಲ ಆರಂಭವಾಗಿ ಹಲಸಿನ ಹಣ್ಣು ಮುಗಿಯುವ ಹೊತ್ತು 'ಆಟಿ' ತಿಂಗಳಲ್ಲಿ (ಜುಲೈ ಕೊನೆ ಮತ್ತು ಆಗಸ್ಟ್ ತಿಂಗಳ ಆರಂಭ) ಈ ಅಂಕವನ್ನು ನಡೆಸುತ್ತಿದ್ದರಂತೆ.

ರೈತರಿಗೆ ಕೃಷಿ ಕೆಲಸದ ಒತ್ತಡದಿಂದ ವಿಶ್ರಾಂತಿ ಮತ್ತು ಮನರಂಜನೆಗೆ ಸಮಯ ಸಿಗುತ್ತಿರಲಿಲ್ಲ. ಕೃಷಿ ಕೆಲಸ ಮುಗಿದ ಸಂತೋಷದಲ್ಲಿ ವಿಶ್ರಾಂತಿಯ ಕಾಲದಲ್ಲಿ ಈ ರೀತಿಯ ಅಂಕಗಳನ್ನು ನಡೆಸಿ ಮನರಂಜನೆ ಪಡೆಯುತ್ತಿದ್ದರೆಂದು ಇದರಿಂದ ತಿಳಿಯಬಹುದು.

<u>4.2.9 : ಗಾದೆ ಮತ್ತು ಒಗಟುಗಳು</u>: ಕೋಳಿಅಂಕ ಅನಾದಿ ಕಾಲದಿಂದಲೂ ನಡೆದು ಬಂದಿದ್ದ ಕ್ರೀಡೆಯಾಗಿದ್ದರೂ ಅದರ ಬಗೆಗೆ ಹೆಚ್ಚು ಗಾದೆಗಳಾಗಲೀ, ಒಗಟುಗಳಾಗಲೀ ದೊರೆಯುವುದಿಲ್ಲ. ಕೋಳಿಗಳ ಮೇಲೆ ಬಂದಿರುವಷ್ಟು ಗಾದೆಗಳು

ಕೋಳಿಅಂಕದ ಬಗೆ ಬಂದಿಲ್ಲ ಎಂಬುದು ಕುತೂಹಲದ ವಿಷಯ. ಆಗಾಧ ಪ್ರಮಾಣದಲ್ಲಿ ಕೋಳಿ ಅಂಕ ನಡೆಯುತ್ತಿದ್ದರೂ ಗಾದೆಗಳು ಯಾಕೆ ಹುಟ್ಟಲಿಲ್ಲ? ಎಂಬುದು ಪ್ರಶ್ನೆಯಾಗಿಯೇ ಉಳಿದು ಬಿಡುತ್ತದೆ.



ಕೋಳಿಅಂಕದ ಬಗ್ಗೆ ದೊರೆಯುವ ಗಾದೆಗಳು ಈ ಕೆಳಗಿನಂತಿವೆ.

“ಹೆಂಗಸರನ್ನು ನಂಬಿ ಕೋಳಿಪಡೆ ಮಾಡುವುದಾ”. ಇದರ ಅರ್ಥವನ್ನು ಹೀಗೆ ಗ್ರಹಿಸಬಹುದು. ಕೋಳಿಅಂಕಕ್ಕೆ ಹೆಂಗಸರು ಯೋಗ್ಯರಲ್ಲ. ಅವರಿಂದ ಅಂಕಕ್ಕೆ ಕೋಳಿಗಳನ್ನು ತಂದು ಕಾಳಗ ನಡೆಸಲು ಸಾಧ್ಯವಿಲ್ಲ.ಎಂದು ಹೇಳಿದರೆ ಮತ್ತೊಂದು ದೃಷ್ಟಿಯಲ್ಲಿ ಹುಂಜಗಳಿಗಿರುವ ವೀರತನ ಹೇಟೆಗಳಿಗಿಲ್ಲ, ಅವುಗಳಿಗೆ ಹೋರಾಟ ನಡೆಸುವ ಶಕ್ತಿಯಿಲ್ಲ. ಹೇಟೆಗಳು ಕಾಳಗ ಮಾಡಬಹುದೆಂದು ಅಂಕಕ್ಕೆ ಒಯ್ದರೆ ಅವುಗಳು ಅಂಕದ ಕಳದಲ್ಲಿ ಕಾಳಗ ಮಾಡುವ ಬದಲು ಹುಂಜಗಳೊಂದಿಗೆ ಸರಸವಾಡಲು ತೊಡಗಬಹುದು ಎಂಬ ನಂಬಿಕೆಯಿಂದ ಈ ಗಾದೆ ಉಗಮವಾಗಿರಬಹುದು.



“ಬದುಕು ಕಳಕೊಳ್ಳುವವನಿಗೆ ಕೋಳಿ ಜೂಜು,
ಭಿಕಾರಿಗೆ ಗಾಳ, ಆಯುಷ್ಯ ತೀರಿದವನಿಗೆ ಬೇಟೆ”

ಕೋಳಿಅಂಕ ಒಂದು ಒಳ್ಳೆಯ ಕಾರ್ಯ ಅಲ್ಲ,ಅದು ಬದುಕನ್ನು ಕಳಕೊಳ್ಳುವವನಿಗಿರುವ ಕೆಲಸ, ಜೀವನವನ್ನು ಹಾಳು ಮಾಡುವವರು ಮಾತ್ರ ಕೋಳಿಅಂಕಕ್ಕೆ ಹೋಗುವರು ಎಂದು ಇಲ್ಲಿ ಹೇಳಲಾಗಿದೆ. ಅದೇ ರೀತಿ ಭಿಕಾರಿಗೆ ಮೀನು ಹಿಡಿಯುವ ಕೆಲಸ ಮತ್ತು ಆಯುಷ್ಯ ತೀರಿದವನಿಗೆ ಬೇಟೆ ಎಂದು ಗಾದೆಯಲ್ಲಿ ಹೇಳಲಾಗಿದೆ. ಸಮುದ್ರ, ನದಿಗಳಲ್ಲಿ ಹೋಗಿ ಮೀನು ಹಿಡಿಯುವುದು ಭಿಕಾರಿಯ ಕೆಲಸ ಎಂದು ಹೀಯಾಳಿಸಿದಂತೆ ಕಂಡು ಬರುತ್ತದೆ. ಬೇಟೆ ಆಯುಷ್ಯ ತೀರಿದವನಿಗೆ ಎಂಬಲ್ಲಿ ಕಾಡು ಬಹಳ ಕ್ರೂರವಾದದ್ದು. ಯಾವಾಗ ಸಾವು ಬರುತ್ತದೆ ಎಂಬುದನ್ನು ಹೇಳುವುದೇ ಸಾಧ್ಯವಿಲ್ಲ. ಆದುದರಿಂದ ಗಾದೆ ಹೀಗೆ ನಿರೂಪಿತವಾಗಿದ್ದಿರಬೇಕು.

ಕೋಳಿಗಳ ಬಗೆಗೆ ಕೆಲವು ಗಾದೆಗಳು ದೊರೆಯುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಅವುಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಅವು ಕೆಳಗಿನಂತಿವೆ.

ಕೋರಿದ ಕೇಂಡದ್ ಅರೆಪು ಕಡೆಪುನೆನ ?
( ಕೋಳಿಯಲ್ಲಿ ಕೇಳಿ ಮಸಾಲೆ ಅರೆಯುವುದೆ ?)

ಕೋರಿದ ಕಾರ್ಗ್ ಗೆಜ್ಜೆ ಕಟ್ಟುಂಡ, ನೆಲ ಒಕ್ಕಂದೆಕುಳ್ಳುವೊ ?
( ಕೋಳಿಯ ಕಾಲಿಗೆ ಗೆಜ್ಜೆ ಕಟ್ಟಿದರೆ ನೆಲ ಕೆರೆಯದೆ ಬಿಟ್ಟೀತೆ?)

ಕೋರಿ ಇತ್ತುಂಡ ಕೊರೊಂಗು ಮುಜೊಬ್ಬೇ?.
( ಕೋಳಿಪಲ್ಯ ಇದ್ದರೆ ಕೊಕ್ಕರೆಪಲ್ಯ ಹಿಡಿಸೀತೆ?)

ಕೋರಿದ ಕಾರ್ ಪೊಲಿಂಡ ದುಡ್ಡುದುಗ್ಗಾಣಿ
(ಕೋಳಿಯ ಕಾಲು ಮುರಿದರೆ ದುಡ್ಡು ದುಗ್ಗಾಣಿ)

ಪೆರಡೆ ಒಕ್ಕುನೆ ಕಿನ್ನಿದಡಿಕ್ಕ್
( ಹೇಟೆ ಕೆರೆದರೆ ಮರಿಗಳ ಕಡೆಗೆ )

ಪೆರಡೆ ಕೆಲೆತ್ತುಂಡ ಇಲ್ಲಗ್ ಮಾಟೊ
( ಹೇಟೆ ಕೂಗಿದರೆ ಮನೆಗೆ ಮಾಟ )

( ಹೆಣ್ಣು ಮಿತಿ ಮೀರಿದರೆ ಮನೆಗೆ ಹಾಳು ' ಎಂಬ ಅರ್ಥದಲ್ಲಿ ಈ ಗಾದೆ
ಯನ್ನು ಸಾಮಾನ್ಯವಾಗಿ ಬಳಸುತ್ತಾರೆ.)

ಕೋಳಿ ಕೋಳಿಯನು ಬಯಸುವವಲ್ಲದೆ ನೋಡು ರಾಜಹಂಸೆಯ ನೋಳ್ಪುದೆ.
(ಹರಿಶ್ಚಂದ್ರ ಕಾವ್ಯ 4–44)

ಕೋಳಿಗೆ ಏತಕ್ಕೆ ಹೊನ್ನ ಪಂಜರವು
(ಪುರಂದರದಾಸರ ಕೀರ್ತನೆಗಳು 1–61)

ಕೋಳಿ ತನ್ನ ಮರಿಗೆ ಮೊಲೆಯ ಹಾಲು ಕೊಟ್ಟು ಸಲಹಿತೆ?
(ಪುರಂದರದಾಸರ ಕೀರ್ತನೆಗಳು 1–68)

ಕೋಳಿಗೇತಕೆ ಸಮ್ಮನಿಹುದು

(ಜ್ಞಾನಸಿಂಧು 1-42)

ಹಾಗದ ಕೋಳಿ ಮುಪ್ಪಾಗದ ಮೇವು ತಿನ್ತು

(ಕಿಟೆಲ್ ಕನ್ನಡ-ಇಂಗ್ಲೀಷ್ ನಿಘಂಟು)

ಕೋಳಿ ಏಕೆ ಕೂಗಬೇಕು, ತನ್ನಿಂದ ಬೆಳಗಾಯಿತೂಂತ ಏಕೆ ಅನ್ನಬೇಕು.

(ಕನ್ನಡ ಗಾದೆಗಳು - ಅಜ್ಜಪ್ಪ)

ಸಾಯ್ತೀನಿ ಸಾಯ್ತೀನಿ ಅಂತ ಸಾವಿರ ಕೋಳಿ ತಿಂದನಂತೆ.

(ನಮ್ಮ. ಗಾದೆಗಳು - ರಾಗಾ)

ಕಾಳ್ ಹಾಕಿದ್ರ ಕೋಳಿಗೇನ ಕಮ್ಮಿ.

ಆಯ್ಕೊಂಡ ತಿಂಬಾ ಕೋಳಿ ಕಾಲ ಮುರ್ದಂಗ

ಕೋಳಿ ಖಾರ್ದರ ತತ್ತಿ ಖರ್ಗಲ್ಲ.

ಊರ್ಗೋಳಿ ಸಂಗಾಟ ನೀರ್ಗೋಳಿ ಸತ್ತೀತಂತೆ.

(ಆಂತುಂ ಗಾದೆಗಳು ಹಾಗೂ ಒಗಟುಗಳು -
ವೀರಣ್ಣ ಎಸ್. ದಂಡೆ.)

ಕೋಳಿ ಕದ್ದೋನಿಗೆ ಸಜ; ತಲೆ ಹೊಡೆದೋನಿಗೆ ವಜ

( ಕನ್ನಡ ಕನ್ನಡ ನಿಘಂಟು - ಕನ್ನಡ ಸಾಹಿತ್ಯ ಪರಿಷತ್ತು

ಅಧ್ಯಾಯ ಐದು

---

## 5. <u>ಕೋಳಿಅಂಕದ ವಿಶ್ಲೇಷಣೆ</u>

5.1: ಉಗಮಕ್ಕೆ ಸಂಬಂಧಿಸಿದ ಕತೆಗಳು, ಐತಿಹ್ಯ ಮತ್ತು ಪೌರಾಣಿಕ ಉಲ್ಲೇಖಗಳು

5.2: ಜನರು ಮತ್ತು ಅವರ ಭಾಗವಹಿಸುವಿಕೆಯ ಸ್ವರೂಪ

5.3: ಕೋಳಿಅಂಕದ ಕಾರ್ಯಗಳು

5.4: ತುಳುವ ಸಂಸ್ಕೃತಿಯಲ್ಲಿ ಕೋಳಿ ಅಂಕದ ಸ್ಥಾನಮಾನ

## 5. ಕೋಳಿಅಂಕದ ವಿಶ್ಲೇಷಣೆ

### 5.1: ಕೋಳಿಅಂಕದ ಉಗಮಕ್ಕೆ ಸಂಬಂಧಿತ ಕತೆಗಳು ಮತ್ತು ಐತಿಹ್ಯ :

ಕೋಳಿಅಂಕ ಆರಂಭವಾದ ಬಗೆಗೆ ಹಲವು ಕತೆಗಳನ್ನು ಜನ ಹೇಳುವುದುಂಟು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನಿರೂಪಕರು ಹೇಳಿದ ಹಲವು ಕತೆಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

1. ರಾಕ್ಷಸರುಗಳ ಉಪಟಳದಿಂದಾಗಿ ದೇವಿ ಬೇರೆ ಬೇರೆ ರೂಪ ತಾಳಿ ಅವರುಗಳನ್ನು ನಾಶ ಮಾಡುತ್ತಾಳೆ. (ದೇವರುಗಳ ಮನಸ್ಸಿನಲ್ಲಿ ಹುಟ್ಟಿದ ಇವರನ್ನು ದೈಹಿಕವಾಗಿ ಕೊಂದರೂ ಮಾನಸಿಕವಾಗಿ ದೇಹಿಗಳಲ್ಲದೆ ಇವರು ಜೀವಿಸುತ್ತಾರೆ ಎಂದು ಜನ ನಂಬಿದ್ದಾರೆ) ಹೀಗೆ ಮರ್ದಿಸಲಾದ ರಾಕ್ಷಸರಿಗೆ ಜಗತ್ತಿನಲ್ಲಿ ಜೀವಿಸುವುದಕ್ಕೆ ದೇವಿ ಅವಕಾಶ ನೀಡುತ್ತಾಳೆ. ರಾಕ್ಷಸರನ್ನು ಒಳ್ಳೆಯ ಮನೆತನದ ಮನೆಗಳಲ್ಲಿ ನೆಲೆ ನಿಲ್ಲಲು ದೇವಿ ಹೇಳುತ್ತಾಳೆ. ಅವರಿಗೆ ಮನೆಯವರು ವರ್ಷದಲ್ಲಿ ಒಮ್ಮೆ ಹೂ ನೀರು ಕೊಟ್ಟು ಭಕ್ತಿಯಲ್ಲಿ ನೇಮ ಉತ್ಸವ ನಡೆಸಿ ಕೊಡಬೇಕು. ಅವರನ್ನು ನೀವು ರಕ್ಷಿಸಿಕೊಂಡು ಬರಬೇಕೆಂದು ದೇವಿ ಅಭಯ ನೀಡುತ್ತಾಳೆ. ನಿಮ್ಮ ಆಹಾರಕ್ಕಾಗಿ ಜಾತ್ರೆ ಮುಗಿದ ನಂತರ ಜನರು ಕೋಳಿಅಂಕವನ್ನು ನಡೆಸುತ್ತಾರೆ. ಆಗ ಅಲ್ಲಿ ಕೋಳಿಗಳ ಜಗಳದಿಂದ ರಕ್ತ ಭೂಮಿಗೆ ಬೀಳುವುದು. ಅದನ್ನು ಪಾನ ಮಾಡಿ ಕೊಂಡು ಇರಬೇಕೆಂದು ವರ ಕೊಟ್ಟಳು. ಇದರಿಂದ ಕೋಳಿಅಂಕಗಳು ಈಗಲೂ ನಡೆಯುತ್ತಿದೆ.

ಕೋಳಿಅಂಕಕ್ಕೆ ಅಂತ್ಯ ಎಂಬುದಿಲ್ಲ. ಭೂಮಿ ಎಲ್ಲಿಯ ತನಕ ಇರುವುದೋ ಅಲ್ಲಿಯ ತನಕ ಕೋಳಿಅಂಕಗಳು ನಡೆಯುತ್ತವೆ.

2. ಮಹಾಭಾರತ ಯುದ್ಧದ ನಂತರದಲ್ಲಿ ಕೋಳಿಅಂಕ ಉಗಮವಾಗಿದೆ ಎಂಬುದಾಗಿ ಈ ಕೆಳಗಿನ ಕತೆ ಹೇಳುತ್ತದೆ.

ಭೀಮ ಹಿಡಿಂಬೆಯನ್ನು ಮದುವೆಯಾಗಿ ಹಸ್ತಿನಾವತಿಗೆ ಕರಕೊಂಡು ಬರುತ್ತಾನೆ. ಆಗ ಅಲ್ಲಿನ ಹೆಂಗಸರು ರಾಕ್ಷಸಿ ಎಂದು ತಮಾಷೆ ಮಾಡುತ್ತಾರೆ. ಹಿಡಿಂಬೆಗೆ ತುಂಬಾ ಬೇಸರವಾಗುತ್ತದೆ. ಆಕೆ ದೇವಿಯ ವರದಿಂದಲೇ ಜನಿಸಿದ ಕಾರಣದಿಂದ ದೇವಿಯನ್ನು ಭಕ್ತಿಯಿಂದ ಪ್ರಾರ್ಥಿಸುತ್ತಾಳೆ. ದೇವಿ ಪ್ರತ್ಯಕ್ಷಳಾದಾಗ ತನ್ನ ಕಷ್ಟ ಸುಖಗಳ ಬಗ್ಗೆ ಹೇಳಿಕೊಳ್ಳುತ್ತಾಳೆ. ದೇವಿ ಹೇಳುತ್ತಾಳೆ 'ಅದಕ್ಕೆ ನೀನೇನು ಬೇಸರಿಸಬೇಡ. ನಿನ್ನ ಹೊಟ್ಟೆಯಲ್ಲಿ ಜನಿಸುವ ಮಗುವಿಗೆ ಜಗತ್ತಿನಲ್ಲಿ ಕೀರ್ತಿ ಬರುವಂತೆ ನಾನು ಮಾಡುತ್ತೇನೆ. ಎಲ್ಲರಿಗೂ ಹೃದಯದಲ್ಲಿ ಜೀವವಿರುವುದು ಆದರೆ ನಿನಗೆ ಹುಟ್ಟುವ ಮಗನಿಗೆ ತಲೆಯಲ್ಲಿ ಜೀವವಿರುವಂತೆ ಮಾಡುತ್ತೇನೆ' ಎಂದು ಅಭಯ ನೀಡುತ್ತಾಳೆ.

ದೇವಿಯ ವರದಂತೆ ಹಿಡಿಂಬೆ ಗರ್ಭವತಿಯಾಗುತ್ತಾಳೆ. ಒಂದು ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಮಗುವಿನ ದೇಹ ತಲೆಗಳನ್ನು ನೋಡಿ ''ಊರ್ಧ್ವಬಾಹು'' ಎಂಬ ಹೆಸರನ್ನು ಇಡುತ್ತಾಳೆ.

ಊರ್ಧ್ವಬಾಹು ಬೆಳೆದು ದೊಡ್ಡವನಾಗುತ್ತಾನೆ. ಒಂದು ದಿನ ಕೃಷ್ಣ ಸುತ್ತಾಡುತ್ತಿರುವಾಗ ಊರ್ಧ್ವಬಾಹು ಒಂದು ಖಡ್ಗವನ್ನು ಮಸೆಯುತ್ತಿದುದನ್ನು ಗಮನಿಸುತ್ತಾನೆ. ಕೃಷ್ಣ ಹತ್ತಿರ ಹೋಗಿ ವಿಚಾರಿಸುತ್ತಾನೆ. ಯಾಕೆ ನೀನು ಈ ಖಡ್ಗವನ್ನು ಮಸೆಯುತ್ತಿದಿ?

ಅದಕ್ಕೆ ಊರ್ಧ್ವಬಾಹು ಹೇಳುತ್ತಾನೆ. ''ಭಾರತ ಯುದ್ಧ ಕುರುಕ್ಷೇತ್ರದಲ್ಲಿ ನಡೆಯುವುದೆಂದು ನಿರ್ಧಾರವಾಗಿದೆ. ಆ ಭಾರತ ಯುದ್ಧದಲ್ಲಿ 101 ಜನ ಕೌರವರ ತಲೆಗಳನ್ನು ಮತ್ತು ಚಂಚಲನಾಗುತ್ತಿರುವ ಕೃಷ್ಣನ ಅರ್ಧ ತಲೆಯನ್ನು ತೆಗೆಯಬೇಕೆಂದು ಕತ್ತಿ ಮಸೆಯುತ್ತಿದೇನೆ'' ಎಂದು ಹೇಳಿದ.

ಕೃಷ್ಣ ಮನಸ್ಸಿನಲ್ಲಿಯೇ ಯೋಚಿಸುತ್ತಾನೆ 'ನಾವು 18 ದಿನಗಳ ಯುದ್ಧ ನಡೆಯಬೇಕೆಂದು ನಿರ್ಧಾರ ಮಾಡಿದೇವೆ. ಈತ ಕತ್ತಿ ಮಸೆಯುವ ರೀತಿ ನೋಡಿ

ದರೆ ಒಂದೇ ದಿನದಲ್ಲಿ ಯುದ್ಧ ಮುಗಿಸಬಲ್ಲ ಎಂದು ಕಾಣುತ್ತದೆ. ಅಷ್ಟು ಸಾಮರ್ಥ್ಯ ಕೂಡಾ ಈತನಲ್ಲಿದೆ. ಜೊತೆಗೆ ನನ್ನ ಅರ್ಧ ಜೀವ ತೆಗೆಯುವ ಸಾಮರ್ಥ್ಯ ಈತನಲ್ಲಿದೆ' ಎಂದುಕೊಂಡು ಊರ್ಧ್ವಬಾಹುವಿನಲ್ಲಿ ಹೇಳುತ್ತಾನೆ ಕೃಷ್ಣ. 'ನೀನು 101 ಕೌರವರನ್ನು ಮತ್ತು ಅರ್ಧ ಕೃಷ್ಣನನ್ನು ಸಂಹಾರ ಮಾಡುವುದೆಂದಿದ್ದರೆ ನೋಡಲ್ಲಿ ಕಾಣುತ್ತಿದೆಯಲ್ಲ ಅಶ್ವತ್ಥದ ಮರ ಅದರ ಗೆಲ್ಲಿಗೆ ನಿನ್ನ ಕತ್ತಿಯಿಂದ ಕಡಿಯಬೇಕು. ಆಗ ಎಷ್ಟು ಎಲೆ ಬೀಳುತ್ತದೆ ಎಂದು ನನಗೆ ಪರೀಕ್ಷೆ ಮಾಡಬೇಕು' ಎಂದನು.

ಕೃಷ್ಣ ಮತ್ತು ಊರ್ಧ್ವಬಾಹು ಅಶ್ವಥ ಮರದ ಬಳಿಗೆ ಹೋಗುತ್ತಾರೆ. 'ಕಡಿ' ಎಂದು ಕೃಷ್ಣ ಹೇಳಿದಾಗ ಊರ್ಧ್ವಬಾಹು ಕತ್ತಿಯಿಂದ ಕಡಿಯುತ್ತಾನೆ. ಕೆಳಗೆ ತುಂಡಾಗಿ ಬಿದ್ದ ಎಲೆಗಳನ್ನು ಲೆಕ್ಕ ಮಾಡುವಾಗ ಸರಿಯಾಗಿ 101 $\frac{1}{2}$ ಎಲೆಗಳಿತ್ತು.

ಕೃಷ್ಣ ಮನಸ್ಸಿನಲ್ಲಿಯೇ ಯೋಚಿಸುತ್ತಾನೆ. ಈ ಊರ್ಧ್ವಬಾಹು ಸಾಮಾನ್ಯ ವ್ಯಕ್ತಿ ಅಲ್ಲ. ನ್ಯಾಯವಾಗಿಯೂ ಕೃಷ್ಣನ ಅರ್ಧ ತಲೆ ತೆಗೆಯುತ್ತಾನೆ' ಎಂದುಕೊಂಡು, ಕೃಷ್ಣ ಊರ್ಧ್ವಬಾಹುವನ್ನು ಬಿಟ್ಟು ಭೀಮ ಇದ್ದಲ್ಲಿಗೆ ಬರುತ್ತಾನೆ. ಭೀಮನಲ್ಲಿಗೆ ಹೇಳುತ್ತಾನೆ. 'ಕೆಂಪು ಬಣ್ಣ ಇರುವ ಶರೀರ ತಲೆಯನ್ನು ತಂದು ಯುದ್ಧ ಆಗುವಲ್ಲಿನ ರಥಕಂಬಕ್ಕೆ ಕಟ್ಟಬೇಕು. ಆ ತಲೆ ಯುದ್ಧವಾದ ವೇಳೆ ಯಾರು ಸೋತಿದ್ದಾರೆ, ಯಾರು ಗೆದ್ದಿದ್ದಾರೆ ಎಂಬ ನಿರ್ಣಯವನ್ನು ನೀಡುತ್ತದೆ. ಆ ರೀತಿಯ ತಲೆಯನ್ನು ತರುವುದು ನಿನ್ನಿಂದ ಅಲ್ಲದೆ ಬೇರೆ ಯಾರಿಂದಲೂ ಸಾಧ್ಯವಿಲ್ಲ' ಎಂದು ಹೇಳಿ ಭೀಮನನ್ನು ಒಪ್ಪಿಸುತ್ತಾನೆ.

ಭೀಮ ಜಗತ್ತಿನ ಮೂಲೆ ಮೂಲೆಯನ್ನು ಸುತ್ತಿ ಬರುತ್ತಾನೆ. ತನ್ನ ಮಗನನ್ನು ಉಳಿದು ಬೇರೆ ಎಲ್ಲೂ ಕೃಷ್ಣ ಹೇಳಿದ ರೀತಿಯ ದೇಹದ ವ್ಯಕ್ತಿಯನ್ನು ಕಾಣುವುದಿಲ್ಲ. ಭೀಮ ಇದರಿಂದ ಚಿಂತಿತನಾಗುತ್ತಾನೆ.

ತಂದೆಯು ಬಳಿಗೆ ಬಂದ ಊರ್ಧ್ವಬಾಹು ತಂದೆಯ ವ್ಯಥೆಗೆ ಕಾರಣ ಕೇಳುತ್ತಾನೆ. ಆದಕ್ಕೆ ಭೀಮ ಕೃಷ್ಣ ಹೇಳಿದ ವಿಚಾರವನ್ನು ಮಗನಿಗೆ ತಿಳಿಸುತ್ತಾನೆ. ಊರ್ಧ್ವಬಾಹುವಿಗೆ ಕೃಷ್ಣನ ವಂಚನೆ ಅರಿವಿಗೆ ಬಂತು. ಭೀಮನಲ್ಲಿ ಹೇಳುತ್ತಾನೆ. 'ಅಪ್ಪ ನೀವು ಅದಕ್ಕಾಗಿ ಚಿಂತಿಸುವ ಅಗತ್ಯವಿಲ್ಲ. ಆ ರೀತಿಯ ತಲೆಯನ್ನು ನಾನು ತಂದು ಕೊಡುತ್ತೇನೆ. ನೀವು ರಾತ್ರಿ ಹೊತ್ತಿನಲ್ಲಿ ಬನ್ನಿ ಆ ತಲೆ ಇರುವ ವ್ಯಕ್ತಿಯನ್ನು ತಂದು ಮುಚ್ಚಿ ಮಲಗಿಸುತ್ತೇನೆ. ನೀವು ಬಟ್ಟೆಯನ್ನು ತೆರೆದು ನೋಡದೆ ತಲೆಯನ್ನು ಕಡಿದು ಕೃಷ್ಣನಿಗೆ ನೀಡಬೇಕೆಂದು ಹೇಳುತ್ತಾನೆ'.

ಅದೇ ರೀತಿ ಭೀಮ ರಾತ್ರಿ ಬಂದು ತಲೆಯನ್ನು ಕತ್ತರಿಸುತ್ತಾನೆ. ತಲೆ ಕತ್ತರಿಸಿದ ನಂತರ ನೋಡುವಾಗ ತನ್ನ ಮಗನ ತಲೆ. ಭೀಮನಿಗೆ ತುಂಬಾ ಶೋಕವಾಗುವುದು. ಕೃಷ್ಣನ ಈ ರೀತಿಯ ಕುತಂತ್ರದಿಂದ ಭೀಮ ಬೇಸರಗೊಳ್ಳುತ್ತಾನೆ. ಕೃಷ್ಣನಿಗೆ ತಲೆಯನ್ನು ತೋರಿಸಿ ಭೀಮ ತನ್ನ ಮಗನ ತಲೆಯನ್ನು ತಾನೇ ಕತ್ತರಿಸಿದೆನಲ್ಲ ಎಂದು ದು:ಖಿಸುತ್ತಾನೆ. ಕೃಷ್ಣ ಭೀಮನನ್ನು ಸಮಾಧಾನಿಸಿ, ನೀನು ಬೇಸರಿಸುವ ಅಗತ್ಯವಿಲ್ಲ. ಈ ರೀತಿಯ ತಲೆ ಇಡೀ ಜಗತ್ತಿನಲ್ಲಿಯೇ ಇಲ್ಲ. ಈ ತಲೆಗೆ ಮುಂದೆ ಕೀರ್ತಿ ಬರುತ್ತದೆ. ಅದನ್ನು ಮುಂದೆ ಹೇಳುತ್ತೇನೆ ಎಂದು ಭೀಮನನ್ನು ಸಮಾಧಾನ ಪಡಿಸಿ ತಲೆಯನ್ನು ರಥಕಂಬಕ್ಕೆ ಕಟ್ಟಲು ಹೇಳುತ್ತಾನೆ.

ಅಲ್ಲಿಂದ ಮುಂದೆ ಯುದ್ಧ ಆರಂಭವಾಗುವುದು. ಯುದ್ಧದಲ್ಲಿ ಕರ್ಣನನ್ನು ಅರ್ಜುನ, ಕೌರವನನ್ನು ಭೀಮ ಕೊಲ್ಲುತ್ತಾರೆ. ಯುದ್ಧ ಮುಗಿದ ನಂತರ ಭೀಮ ಮತ್ತು ಅರ್ಜುನರಲ್ಲಿ ನನ್ನಿಂದ ಯುದ್ಧ ಗೆದ್ದದ್ದು, ನನ್ನಿಂದ ಗೆದ್ದದ್ದು ಎಂದು ಚರ್ಚೆ ಬರುತ್ತದೆ. ಚರ್ಚೆ ಕಲಹವಾಗಿ ಮಾರ್ಪಟ್ಟು ಆಯುಧ ಹಿಡಿದುಕೊಳ್ಳುವ ತನಕ ಮುಂದುವರಿಯುವುದು. ಆಗ ಕೃಷ್ಣ ಹೇಳುತ್ತಾನೆ. 'ನೀವು ಯಾಕಾಗಿ ಕಲಹ ಮಾಡಿಕೊಳ್ಳುವಿರಿ. ನಾವು ಪರೀಕ್ಷೆಗಾಗಿಯೇ ರಥಕಂಬದಲ್ಲಿ ತಲೆಯನ್ನು ಕಟ್ಟಿದ್ದೇವೆ. ಆ ತಲೆಯಲ್ಲಿ ಹೋಗಿ ಕೇಳಬೇಕು ಎಂದನು. ಅದರಂತೆ ಭೀಮ, ಕೃಷ್ಣ, ಅರ್ಜುನ ರಥಕಂಬದ ಬಳಿ ಬಂದು ತಲೆಯಲ್ಲಿ ಕೇಳುತ್ತಾರೆ. ಆಗ ತಲೆ

ಹೇಳಿತು – '' ನೀವು ಯಾರು ಯುದ್ಧ ಗೆದ್ದದ್ದನ್ನು ನಾನು ನೋಡಲಿಲ್ಲ. ಕೃಷ್ಣನ ಚಕ್ರ ತಿರುಗುತ್ತಿತ್ತು, ಚಂಡಿಕೆ ರಕ್ತಪಾನ ಮಾಡುತ್ತಿದ್ದಳು ಇಷ್ಟೆ ಅಲ್ಲದೆ ಬೇರೆ ಯಾರೂ ಏನೂ ಮಾಡಿದ್ದಿಲ್ಲ'' ಎಂದಿತು. ಇದರಿಂದ ಭೀಮನಿಗೆ ಸಿಟ್ಟು ಬಂತು. 'ನಾನು ಇಷ್ಟೆಲ್ಲ ಮಾಡಿದರೂ ತಲೆ ಹೀಗೆ ಹೇಳಿತಲ್ಲ' ಎಂದು ಹೇಳಿ ಭೀಮನು ತನ್ನ ಗದೆಯಲ್ಲಿ ತಲೆಗೆ ಹೊಡೆದನು. ತಲೆ ಪುಡಿ ಪುಡಿಯಾಗಿ ಭೂಮಿಗೆ ಬಿತ್ತು. ಭೂಮಿಯಲ್ಲಿ ತಲೆಗಳ ಚೂರುಗಳು ಜಗಳಕ್ಕೆ ಆರಂಭಿಸಿದವು. ಅದನ್ನು ನಿಲ್ಲಿಸುವುದು ಸಾಧ್ಯವಿಲ್ಲದ ಸ್ಥಿತಿ ತಲುಪಿತು. ಕೃಷ್ಣ ಹೇಳಿದ 'ನೀವು ಜಗಳ ನಿಲ್ಲಿಸಿ ನಿಮಗೆ ಪರಿಹಾರ ನಾನು ಸೂಚಿಸುತ್ತೇನೆ' ಎಂದು. ತಲೆಗಳ ಚೂರುಗಳು ಕೇಳಿದವು, 'ಇಡೀ ಭಾರತ ಯುದ್ಧವನ್ನು ಗೆಲ್ಲುವ ಶಕ್ತಿ ನನ್ನಲ್ಲಿತ್ತು. ಆದರೆ ಅದನ್ನು ಹಾಳು ಮಾಡಿದವನು ಕಪಟ ನಾಟಕಿ ನೀನು, ಮುಂದೆ ನನ್ನ ಕೀರ್ತಿ ಉಳಿಯುವಂತೆ ಮಾಡು' ಎಂದು ಕೇಳಿಕೊಂಡವು.

ಅದಕ್ಕೆ ಕೃಷ್ಣ ಹೇಳುತ್ತಾನೆ. 'ನೀವು (ತಲೆಯ ಚೂರುಗಳು) ಮುಂದಿನ ಜನ್ಮದಲ್ಲಿ ಕೋಳಿಗಳಾಗಿ ಹುಟ್ಟಬೇಕು ಬೇರೆ ಬೇರೆ ಜಾತಿ, ಬಣ್ಣಗಳಲ್ಲಿ ಹುಟ್ಟಬೇಕು. ನಿಮ್ಮ ಸಾರಥಿತನವನ್ನು ಯಾರು ಮಾಡುತ್ತಾರೋ ಅಂತಹವರಿಗೆ ನಾನು ರಕ್ಷಣೆ ನೀಡುತ್ತೇನೆ. ಕೋಳಿಗಳಾಗಿ ಕಾದಾಟ ನಡೆಸಬೇಕು. ಒಂದೊಂದು ದಿನ ಒಂದೊಂದು ಜಾತಿ, ಬಣ್ಣ ಗೆಲ್ಲುವಂತೆ ಮಾಡುತ್ತೇನೆ. ಭೂಮಿ ಎಲ್ಲಿಯತನಕ ಇರುವುದೋ ಅಲ್ಲಿಯತನಕ ಊರ್ಜಿತವಾಗಿ ನಿಮ್ಮ ಕೀರ್ತಿ ಉಳಿಯುತ್ತದೆ.' ಎಂದು ಅಭಯ ನೀಡುತ್ತಾನೆ. ಇದರಿಂದಾಗಿ 'ಕೋಳಿಅಂಕ' ಈಗಲೂ ನಡೆದುಕೊಂಡು ಬರುತ್ತಿದೆ. ಎಂದು ಉಗಮದ ಬಗೆಗೆ ಕತೆ ಹೇಳುತ್ತಾರೆ.

3. ಕೋಳಿಗೆ ಇರುವ ಅಹಂಕಾರದ ಬಗ್ಗೆ ರಾಮಾಯಣದಲ್ಲಿ ಕತೆಯೊಂದು ಹೀಗಿದೆ ಎನ್ನುತ್ತಾರೆ.

ರಾಮ ರಾವಣನೊಂದಿಗೆ ಯುದ್ಧ ಮಾಡುವುದಕ್ಕಾಗಿ ಲಂಕೆಗೆ ಹೋಗಲು ಕಪಿ ಸೈನ್ಯದೊಂದಿಗೆ ಸೇತುವೆಯನ್ನು ನಿರ್ಮಿಸಲು ತೊಡಗಿರುತ್ತಾನೆ. ಆಗ ಪ್ರತಿಯೊಂದು ಪ್ರಾಣಿಗಳೂ ತನ್ನ ಕೈಯಿಂದ ಸಾಧ್ಯವಾದ ಸೇವೆ ಮಾಡುತ್ತಿತ್ತು.

ಅಳಿಲುಗಳು ಕೂಡ ಒಮ್ಮೆ ನೀರಲ್ಲಿ ಮುಳುಗಿ ಮರಳಿನಲ್ಲಿ ಮುಳುಗಿ ಹೋಗಿ ಮೈಯಲ್ಲಿ ಅಂಟಿದ ಮರಳನ್ನು ಸೇತುವೆಯ ಮೇಲೆ ಹಾಕುತ್ತಿದ್ದವು. ಇದರಿಂದ ಅಳಿಲಿನ ಬೆನ್ನನ್ನು ರಾಮ ಪ್ರೀತಿಯಿಂದ ಸವರಿದಾಗ ಮೂರು ಗೆರೆಗಳು ಮೂಡಿದವಂತೆ. ಈ ಕೆಲಸವನ್ನು ಮರದ ಮೇಲೆ ಕುಳಿತು ನೋಡುತ್ತಿತ್ತು ಕೋಳಿ. ಆದರೆ ಅದು ಯಾವ ಕೆಲಸವನ್ನು ಮಾಡದೆ ಜಂಭದಿಂದ ಕೋ ಕ್ಕೋ ಕ್ಕೋ ಎಂದು ಕೂಗಿಕೊಂಡು ಕುಳಿತಿತ್ತು. ರಾಮನೇ ಸ್ವತ: ಕರೆದರೂ ಕೋಳಿ ಬರಲಿಲ್ಲ. ಕೋಳಿ ಹೇಳಿತು 'ಚಕ್ರ ಮುಂಡಸು ಜುಟ್ಟು ಇದ್ದವನು ನಿನ್ನ ಸೇವೆ ಮಾಡುವುದಾ' ನಾನು ಬರುವುದಿಲ್ಲ ಹೋಗು ಎಂದಿತು. ರಾಮನಿಗೆ ಕೋಳಿಯ ಮೇಲೆ ಬಹಳ ಬೇಸರವಾಯಿತು. ಅಳಿಲಿನಿಂದ ಮಂಗ, ಮನುಷ್ಯರ ವರೆಗೂ ರಾಮ ಸೇವೆ ಎಂದು ಕೆಲಸ ಮಾಡುತ್ತಿರುವಾಗ ಈ ಕೋಳಿಗೇನು ಅಹಂಕಾರ ಎಂದು ಹೇಳಿ ರಾಮ, ಕೋಳಿಗೆ ಶಾಪ ಕೊಡುತ್ತಾನೆ. 'ನಿನಗೆ ನಿಂತಲ್ಲಿ ಮರಣ ಬರಲಿ' ಎಂದು. ಅಂದಿನಿಂದ ಕೋಳಿಯನ್ನು ಮನುಷ್ಯ ಸಾಕತೊಡಗಿದೆ. ತನಗೆ ಅವಶ್ಯವಿದ್ದಾಗ ಆಹಾರಕ್ಕಾಗಿ ಕೊಲ್ಲ ತೊಡಗಿದ. ಜೊತೆಗೆ ಕೋಳಿಅಂಕದಲ್ಲಿ ಕೋಳಿಗಳನ್ನು ಬಳಸಿಕೊಂಡ. ಇದರಿಂದ ಕೋಳಿಗಳಿಗೆ ನಿಂತಲ್ಲಿ ಮರಣ ಬರುತ್ತದೆ. ಯಾವ ಹೊತ್ತಿಗೆ ಕೋಳಿ ಸಾಯಬಹುದು ಎಂದು ನಿಗದಿತವಾಗಿ ಹೇಳುವುದು ಸಾಧ್ಯವಿಲ್ಲ.

4. ಹಿಂದೆ ಕೇರಳದಲ್ಲಿ ತಚೊಳ್ಳಿಲವದನೆ ಎಂಬ ಪಡೆ ಆಳು ಇದ್ದನಂತೆ. ಆತ ನಾಯರ್ ಜಾತಿಯವನು. ಆತ ಪಡೆಗಳನ್ನು ತೆಗೆದು ಅದರಲ್ಲಿ ಪ್ರತಿಸಲವೂ ಗೆಲ್ಲುತ್ತಿದ್ದನಂತೆ. ಒಂದು ಸಲ ಪಡೆಯಲ್ಲಿ ಆತ ಸೋತು ಸಾಯುವ ಸ್ಥಿತಿಗೆ ಬಂದ. ಆಗ ಆತನ ಹೆಂಡತಿ ಮತ್ತು ಮಕ್ಕಳು ಅಳುವುದನ್ನು ಕಂಡ. ತಚೊಳ್ಳಿಲವದನನಿಗೆ ಬಹಳ ಬೇಸರವಾಯಿತಂತೆ. ಆದರಿಂದ ಆತ ಸಾಯುವ ಸಮಯದಲ್ಲಿ ಹೇಳುತ್ತಾನೆ. ಇಲ್ಲಿಗೆ ಮನುಷ್ಯ ಮನುಷ್ಯನ ನಡುವೆ ಕಾಳಗ (ಪಡೆ) ನಡೆಸಬಾರದು. ಕೋಳಿಗಳು ತಿನ್ನುವುದಕ್ಕಾಗಿಯೇ ಇರುವಂತಹದು. ಅವುಗಳನ್ನು ಕಾಳಗದಲ್ಲಿ ಬಳಸಿ ತಮ್ಮ ಬಲಾಬಲವನ್ನು ನೋಡಿಕೊಳ್ಳಿ ಎಂದು ಹೇಳುತ್ತಾನೆ. ಕಾಳಗಕ್ಕೆ ಕೋಳಿ, ಟಗರು, ಎತ್ತುಗಳನ್ನು ಬಳಸಬಹುದು ಎಂದು ಹೇಳಿ ಸಾಯುತ್ತಾನಂತೆ.

ಅನಂತರದಲ್ಲಿ ಕೋಳಿಅಂಕ ನಡೆಯಲಾರಂಭಿಸಿತು ಎಂದು ಕೆಲವರು ಹೇಳುತ್ತಾರೆ.

ಮೇಲಿನ ಕತೆಗಳನ್ನು ಮತ್ತು ಐತಿಹ್ಯಗಳನ್ನು ಗಮನಿಸಿದಾಗ ಈ ಕೆಳಗಿನ ಅಂಶಗಳು ಸ್ಪಷ್ಟವಾಗುತ್ತವೆ.

(1). ಮುಖ್ಯವಾಗಿ ಈ ಕತೆಗಳು ಕೋಳಿಯೊಂದರ ಜಗಳದ ಗುಣವನ್ನು ಮಾತ್ರ ಮಂಡಿಸುತ್ತವೆ. ಮೊದಲ ಕತೆಯಲ್ಲಿ ಕೋಳಿಗಳು ಪೂರ್ವಜನ್ಮದಲ್ಲಿ ರಾಕ್ಷಸರು ಗಳಾಗಿರುತ್ತವೆ ಎಂದು ಹೇಳಲಾಗಿದೆ. ಜೊತೆಗೆ ೭ ರಾಕ್ಷಸರುಗಳು ಉಪಟಳ ನೀಡುವವರು ಎಂದೂ ವಿವರಿಸಲಾಗಿದೆ. ಇಲ್ಲಿ ರಾಕ್ಷಸರುಗಳ ಜಗಳಗಂಟತನವನ್ನು ಕೋಳಿಗಳ ಮೇಲೆ ಆರೋಪಿಸಲಾಗಿದೆ.

(2). ಎರಡನೇ ಕತೆಯೂ ಕೋಳಿಗಳ ಜಗಳದ ಗುಣವನ್ನು ಕೀರ್ತಿಸುತ್ತದೆ. ಊರ್ಧ್ವಬಾಹುವಿನ ತಲೆಯ ಚೂರುಗಳು ಕೋಳಿಗಳಾಗಿ ಜನಿಸುತ್ತವೆ ಮತ್ತು ಕಾದಾಡುತ್ತವೆ.

(3). ಮೂರನೆಯ ಕತೆಯಲ್ಲಿ ಕೋಳಿಯ ಜಂಭವನ್ನು ಕೀರ್ತಿಸಲಾಗಿದೆ. ಅದು ರಾವಣನನ್ನು ಕೂಡ ಪ್ರಶ್ನಿಸುತ್ತದೆ.

(4). ಕೊನೆಯ ಕತೆಯಲ್ಲಿ ಮನುಷ್ಯನ ಕಾದಾಡುವ ಪ್ರವೃತ್ತಿಯನ್ನು ಕೋಳಿ ಗಳಿಗೆ ವರ್ಗಾಯಿಸಲಾಗಿದೆ.

ಮೇಲಿನ ನಾಲ್ಕು ಕತೆಗಳು ಕೂಡ ಕೋಳಿಅಂಕದ ಕೋಳಿಗಳ ಗುಣವನ್ನು ಸಮರ್ಥಿಸಲೆಂದೇ ಸೃಷ್ಟಿಯಾದವು. ಅಂಕದ ಕೋಳಿಗಳಿಗೆ ಕಾದಾಡುವ ಗುಣ ಬೇಕು, ಸಾಮರ್ಥ್ಯ ಬೇಕು, ಅಹಂಕಾರ ಬೇಕು ಎಂಬ ಧೋರಣೆ ಮನುಷ್ಯರದು. ಈ ಗುಣವನ್ನು ಕೋಳಿಗಳ ಮೇಲೆ ಆರೋಪಿಸಲಾಗಿದೆ.

## 5.2: ಜನರು ಮತ್ತು ಅವರ ಭಾಗವಹಿಸುವಿಕೆಯ ಸ್ವರೂಪ:

ಕೋಳಿಅಂಕದಲ್ಲಿ ತುಳುನಾಡಿನ ಜನರು ತಮ್ಮನ್ನು ತೊಡಗಿಸಿಕೊಂಡಿರುವ ರೀತಿ ಬಹಳ ವಿಚಿತ್ರವಾದುದು. ಕೋಳಿ ಮರಿ ಇರುವಾಗಲೇ ಅದನ್ನು ಅಂಕದ ಕೋಳಿಯನ್ನಾಗಿಸುವ ಹಟ ಜನರಿಗೆ ಬರುತ್ತದೆ. ಅನಂತರ ಅತ್ಯಂತ ಎಚ್ಚರಿಕೆಯಿಂದ ಆ ಕೋಳಿಯನ್ನು ಸಾಕಲಾಗುತ್ತದೆ. ಕೋಳಿ ಬೆಳೆಯುತ್ತಿದ್ದಂತೆ ಅದರ ಯಜಮಾನನು ಕೋಳಿಯೊಡನೆ ಒಂದು ಬಗೆಯ ತಾದಾತ್ಮ್ಯವನ್ನು ಸಾಧಿಸಿಕೊಂಡು ಬಿಡುತ್ತಾನೆ. ದಿನದ ಕೆಲವು ಗಂಟೆಗಳವರೆಗೆ ಅವನು ಕೋಳಿಯೊಡನೆ ಬದುಕುತ್ತಾನೆ. ಅದಕ್ಕೆ ಆಹಾರ ಕೊಡುವುದರಿಂದ ತೊಡಗಿ ಅದರ ಎಲ್ಲ ಕೆಲಸಗಳನ್ನು ಆತ ಮಾಡುತ್ತಾನೆ. ಅಥವಾ ಮಾಡಿಸುತ್ತಾನೆ. ಅದರ ಕಾಲಿನ ಉಗುರುಗಳನ್ನು ತೆಗೆಯುವುದು, ರೆಕ್ಕೆ ಅಡಿಯ ಚಿಕ್ಕ ಗರಿಗಳನ್ನು ತೆಗೆಯುವುದು, ಕೋಳಿಯ ಜುಟ್ಟನ್ನು ಒಪ್ಪವಾಗಿರಿಸುವುದು, ಕೋಳಿಯ ಮೈ ಕೊಳಕಾಗಾಗದಂತೆ ಎಚ್ಚರ ವಹಿಸುವುದು, ಅದಕ್ಕೆ ಉಚಿತವಾದ ಕಾಳುಗಳನ್ನು ತಿನ್ನಿಸುವುದು, ನೀರು ಕುಡಿಸುವುದು ಇತ್ಯಾದಿ ಕೆಲಸಗಳನ್ನು ಆತ ಬಹಳ ಆಸಕ್ತಿಯಿಂದ ಮಾಡುತ್ತಾನೆ. ಕೋಳಿಯ ಬದುಕು ಮತ್ತು ಕೋಳಿಯ ಯಜಮಾನನ ಬದುಕು ದಿನದ ಕೆಲವು ಹಂತಗಳಲ್ಲಿ ಒಂದಾಗಿ ಬಿಡುತ್ತದೆ. ಇದರ ಅಂತಿಮ ಪರಿಣಾಮ ಎಂದರೆ ತಾವು ಸಾಕಿದ ಕೋಳಿ ಸತ್ತಾಗ ಅದನ್ನು ತಿನ್ನದೇ ಇರುವುದು. ಅಂಕದ ಕೋಳಿ ಹೆಚ್ಚು ಕೋಳಿಗಳನ್ನು ಗೆದ್ದರೆ ಆ ಕೋಳಿಗೆ ಸಮುದ್ರ ಸ್ನಾನ ಮಾಡಿಸುವುದು ಇದೆ ಮತ್ತು ಅಂತಹ ಕೋಳಿ ಸತ್ತಾಗ ಅದನ್ನು ನೆಲದಲ್ಲಿ ಹುಗಿದು ಹೊಂಡದ ಮೇಲೊಂದು ತೆಂಗಿನ ಗಿಡವನ್ನು ನೆಟ್ಟು ಬಿಡುತ್ತಾರೆ.

ಅಂಕದ ಸಂದರ್ಭದಲ್ಲಿ ತುಳುನಾಡಿನಾದ್ಯಂತ ಜನ ಕೋಳಿಗಳ ಬಗ್ಗೆ ಅದರ ಹೋರಾಟ ಮತ್ತಿತರ ವಿಷಯಗಳ ಬಗೆಗೆ ಎಲ್ಲೆಂದರಲ್ಲಿ ಮಾತನಾಡುತ್ತಲೇ ಇರುತ್ತಾರೆ. ಅಂಕದ ಕೋಳಿಗಳನ್ನು ದಿಟ್ಟಿಸಿ ನೋಡಿಕೊಂಡೇ ಇರುವವರೂ ಇರುತ್ತಾರೆ. ಹಾಗೆಯೇ ಮಾರುತಿ ಕಾರುಗಳಲ್ಲಿ ಅಂಕದ ಕೋಳಿಗಳನ್ನು ಕೊಂಡೊಯ್ಯುವಾಗ ಅಂತಹ ಕೋಳಿಗಳ ಬೆನ್ನು ಹಿಂದೆಯೇ ಸಾಗುವ ಜನರೂ ಇರುತ್ತಾರೆ. ಅಂಕದ ದಿನವಂತೂ ಕಾದಾಟದ ಕೋಳಿ ಮತ್ತು ಅದರ ಯಜಮಾನ

ಬಹುಮಟ್ಟಿಗೆ ಒಂದೇ ಆಗಿರುತ್ತಾರೆ. ಕಾದಾಟದ ಕೋಳಿಯ ಸೋಲು ಅದರ ಯಜಮಾನನ ಸೋಲೇ ಆಗಿರುತ್ತದೆ.

ತುಳುನಾಡಿನ ಎಲ್ಲ ಜಾತಿಯ ಜನರು ಕೋಳಿಅಂಕದಲ್ಲಿ ಭಾಗವಹಿಸುತ್ತಾರಾದರೂ ಬಂಟರು ಮತ್ತು ಬಿಲ್ಲವರುಗಳ ಭಾಗವಹಿಸುವಿಕೆ ತೀರಾ ಜಾಸ್ತಿ. ಅದರಲ್ಲಿಯೂ ಭೂ ಮಾಲಿಕ ವರ್ಗಕ್ಕೆ ಸೇರಿದ ಬಂಟ ಜಾತಿಯ ಜನರ ಭಾಗವಹಿಸುವಿಕೆ ತೀವ್ರ ಸ್ವರೂಪದ್ದು. ಸಾಮಾನ್ಯವಾಗಿ ಬಂಟನೊಬ್ಬನಿಲ್ಲದೆ ಕೋಳಿಅಂಕವೇ ನಡೆಯಲಾರದು. ಅಂಕದಲ್ಲಿ ಗೆದ್ದ ಕೋಳಿಯನ್ನು 'ಬಂಟ' ನೆಂದೇ ಕರೆಯುವುದುಂಟು. ಈಚಿನ ದಿನಗಳಲ್ಲಿ ಬಿಲ್ಲವರ ಭಾಗವಹಿಸುವಿಕೆ ಕೂಡಾ ಹೆಚ್ಚಾಗುತ್ತಿದೆ. ತುಳುನಾಡಿನ ಉತ್ತರ ಭಾಗದಲ್ಲಿರುವ ಮೊಗವೀರರು ಪೂರ್ವಭಾಗದಲ್ಲಿರುವ ಗಾಡರು ಇತ್ತೀತ್ತಲಾಗಿ ಪ್ರಸಿದ್ಧ ಕೋಳಿಅಂಕಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ತುಂಬಾ ಸೂಕ್ಷ್ಮವಾಗಿ ನೋಡಿದಾಗ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಜನರೇ ಕೋಳಿಅಂಕದಲ್ಲಿ ಹೆಚ್ಚಾಗಿ ಪಾಲ್ಗೊಳ್ಳುತ್ತಿರುವುದು ಕಂಡು ಬರುತ್ತಿದೆ. ಇದಕ್ಕೆ ಕಾರಣವನ್ನು ತರ್ಕಿಸುವುದು ಕಷ್ಟ. ಬಹುಶಃ ಮಾತೃಪ್ರಧಾನ ವ್ಯವಸ್ಥೆಯಲ್ಲಿ ಗಂಡಸರು ತಾವು ಕಳಕೊಂಡ ಅಧಿಕಾರವನ್ನು ಈ ಜನರು ಕೋಳಿಅಂಕದಲ್ಲಿ ತುಂಬಿಕೊಳ್ಳುತ್ತಿದ್ದಾರೆ ಎಂದು ತೋರುತ್ತದೆ.

<u>5.3: ಕೋಳಿಅಂಕದ ಕಾರ್ಯಗಳು</u>: ಕೋಳಿಅಂಕಕ್ಕೆ ಐದು ರೀತಿಯ ಕಾರ್ಯಗಳಿವೆ. ಅವುಗಳೆಂದರೆ ಪ್ರತಿಷ್ಠೆ, ಮನರಂಜನೆ ಮತ್ತು ಆಹಾರ, ಧಾರ್ಮಿಕ ಭಯ, ಆರ್ಥಿಕ ಮತ್ತು ಸಮುದಾಯ ಪ್ರಜ್ಞೆ.

ಕೋಳಿಅಂಕ ನಡೆಯಬೇಕಾದರೆ ಈ ಐದರಲ್ಲಿ ಯಾವುದಾದರೊಂದು ಕಾರಣ ಇರುತ್ತದೆ. ಇವುಗಳನ್ನು ಮೀರಿ ಕೋಳಿಅಂಕ ನಡೆಯುವುದು ಸಾಧ್ಯವಿಲ್ಲ. ಅವುಗಳನ್ನು ಕೆಳಗಿನಂತೆ ವಿವರಿಸಲಾಗಿದೆ.

ಪ್ರತಿಷ್ಠೆ: ಹಿಂದಿನ ಕಾಲದಲ್ಲಿ ಕೋಳಿಅಂಕಗಳನ್ನು ಪ್ರತಿಷ್ಠೆಗಾಗಿಯೇ ನಡೆಸುತ್ತಿದ್ದರು. ಒಂದು ಊರಿನಲ್ಲಿ ಒಬ್ಬ ಮುಖ್ಯಸ್ಥ ಇದ್ದರೆ ಆತ ಮತ್ತೊಂದು ಊರಿನ ಮುಖ್ಯಸ್ಥನೊಂದಿಗೆ ತನ್ನ ಶಕ್ತಿ ಸಾಮರ್ಥ್ಯದ ಪ್ರದರ್ಶನ ಮಾಡಬೇಕಾಗಿ ಬಂದಾಗ ಕೋಳಿಅಂಕವನ್ನು ಅಸ್ತ್ರವಾಗಿ ಬಳಸಿಕೊಂಡಿದ್ದರು ಎಂದು ಕೆಲವು ನಿರೂಪಕರು ಹೇಳುತ್ತಾರೆ. ಒಂದೇ ಊರಿನಲ್ಲೂ ಇದು ನಡೆಯುತ್ತಿದ್ದವಂತೆ. ಊರಿನ ಗುರಿಕಾರ ತನ್ನ ಸಾಮರ್ಥ್ಯಕ್ಕೆ ಅನುಗುಣವಾಗಿ ಕೋಳಿಗಳನ್ನು ಆಳುಗಳನ್ನಿಟ್ಟುಕೊಂಡು ಸಾಕುತ್ತಿದ್ದರಂತೆ. ಅದು ಈಗಲೂ ನಡೆಯುವುದನ್ನು ಕಾಣಬಹುದು. ಕೋಳಿಅಂಕದಲ್ಲಿ ಗೆದ್ದವರಿಗೆ ಒಂದು ರೀತಿಯ ಗೌರವವಿರುತ್ತದೆ. ಒಳ್ಳೆಯ ಕೋಳಿ ಇದ್ದರೆ ಅವನಿಗೆ ಸಲ್ಲುವ ಗೌರವವೇ ಬೇರೆ. ಇದೆಲ್ಲ ಪ್ರತಿಷ್ಠೆಗೆ ಕಾರಣವಾಗುತ್ತದೆ. ಈ ಅರ್ಥದಲ್ಲಿ ಕೋಳಿಅಂಕಕ್ಕೆ 'ಪ್ರತಿಷ್ಠೆ'ಯ ಆಯಾಮವಿದೆ.

ಮನರಂಜನೆ ಮತ್ತು ಆಹಾರ: ಕೋಳಿಗಳನ್ನು ಕೃಷಿಕರು ಹೆಚ್ಚು ಸಾಕುತ್ತಾರೆ. ಕೋಳಿಅಂಕವನ್ನು ಇವರೇ ಹೆಚ್ಚಾಗಿ ನಡೆಸುವುದನ್ನು ಕಾಣಬಹುದು. ತಮ್ಮ ಕೃಷಿ ಕೆಲಸಗಳಿಂದ ಆಯಾಸಗೊಂಡ ಇವರು ಮನ ಸಂತೋಷಕ್ಕಾಗಿ ಮದ್ಯವನ್ನು ಸೇವಿಸುತ್ತಾರೆ. ಇದರಿಂದ ತಮ್ಮ ನೋವನ್ನು ಮರೆಯುತ್ತೇವೆ ಎಂದು ಭಾವಿಸುತ್ತಾರೆ. ಮದ್ಯವನ್ನು ಸೇವಿಸಿದಾಗ ಮತ್ತೂ ಮನರಂಜನೆ ಅಗತ್ಯ ಎಂದು ಅವರಿಗೆನಿಸುತ್ತದೆ. ಅದಕ್ಕಾಗಿ ಶರಾಬು ಅಂಗಡಿಯ ಬಳಿಯಲ್ಲಿ ಕೋಳಿಅಂಕಗಳನ್ನು ನಡೆಸಿ ಸಂತೋಷ ಪಡುತ್ತಾರೆ. ಮನೆಯಲ್ಲಿ ಸಾಕಿದ ಕೋಳಿಗಳನ್ನು ಕೊಂದು ತಿನ್ನುವುದು ಅವರಿಗೆ ಖುಷಿ ನೀಡುವುದಿಲ್ಲವಂತೆ. ಅದಕ್ಕಾಗಿ ಹೇಗೂ ಸಾಯುವಂತಹ ಕೋಳಿಗಳನ್ನು ಆಟವಾಡಿಸಿ ಅವುಗಳಿಗೆ ನೋವು ಮಾಡುವ ಮೂಲಕ ತಾನು ಸಂತೋಷಪಟ್ಟು, ಅವು ಸತ್ತ ಮೇಲೆ ಅವನ್ನು ಆಹಾರವಾಗಿ ಸೇವಿಸುವುದು ಮನುಷ್ಯ ರೂಢಿಸಿ ಕೊಂಡಂತಿದೆ.

ಧಾರ್ಮಿಕ ಭಯ: ಕೋಳಿಅಂಕ ನಡೆಸುವುದರಿಂದಾಗಿ ದೇವತೆಗಳಿಗೆ ಸಂತೋಷವಾಗುತ್ತದೆ. ಕಾಳಗ ನಡೆಯುವಾಗ ಬಾಳು ತಾಗಿ ಬಂದ ರಕ್ತ ಭೂಮಿಗೆ ಬೀಳುತ್ತದೆ. ಅದನ್ನು ದೇವತೆಗಳು ಸೇವಿಸಿ ಸಂತೋಷ ಪಡುತ್ತಾರೆ ಎಂದು ಜನ ಭಾವಿಸುತ್ತಾರೆ. ನಿಗದಿತ ಸ್ಥಳದಲ್ಲಿ ಅಂಕ ನಡೆಯದಿದ್ದಲ್ಲಿ ಜನ ಗಾಬರಿಗೊಳ್ಳುವುದಕ್ಕೆ ಇದೇ ಕಾರಣ.

ರಕ್ತಬಿಂದು ಗಣಗಳಿಗೆ ದೊರೆಯದೆ ಕಾರಣ ಅವರು ಉಪಟಳ ನೀಡುವರು ಎಂದು ನಂಬುತ್ತಾರೆ. ಕೋಳಿಅಂಕ ನಡೆಯ ಬೇಕಾಗಿದ್ದ ಸ್ಥಳದಲ್ಲಿ ಯಾವ ಅಪಾಯವಾದರೂ ಅದು ದೇವತೆ ಗಣಗಳ ಕೋಪದಿಂದ ಎಂದು ಜನ ಭಾವಿಸುತ್ತಾರೆ. ಇದರಿಂದಾಗಿ ಕೋಳಿ ಅಂಕವನ್ನು ದೈವ ದೇವರುಗಳ ಜಾತ್ರೆಯ ನಂತರ ಮಾಡುವುದನ್ನು ತಪ್ಪಿಯೂ ಮರೆಯುವುದಿಲ್ಲ. ಕಾನೂನು ಇದಕ್ಕೆ ಅಡ್ಡ ಬಂದರೂ, ಅದಕ್ಕೆ ಬೇಕಾದ ವ್ಯವಸ್ಥೆಯನ್ನು ಜನ ಮಾಡಿಕೊಂಡು ಅಂಕ ನಡೆಸುವುದು ತುಳುನಾಡಿನಲ್ಲಿ ಸಾಮಾನ್ಯ.

<u>ಆರ್ಥಿಕ</u>: ಕೋಳಿಅಂಕದಿಂದ ಹಣ ಗಳಿಸಲು ಸಾಧ್ಯ ಎಂದು ಜನ ಭಾವಿಸುತ್ತಾರೆ. ಅದಕ್ಕಾಗಿ ಹೆಚ್ಚು ಹೆಚ್ಚು ಜೂಜು ಕಟ್ಟುವುದನ್ನು ಕಾಣಬಹುದು. ಕೋಳಿಅಂಕಕ್ಕೆ ಕೋಳಿಗಳನ್ನು ತರದೆ ಕೇವಲ ಜೂಜು ಕಟ್ಟುವ ಸಲುವಾಗಿಯೇ ಅಂಕಕ್ಕೆ ಬರುವ ಜನ ಅನೇಕ. ಜಾಣರು ಅಂಕದಲ್ಲಿ ಹಣ ಗಳಿಸುತ್ತಾರೆ. ಕೆಲವರು ತಾವು ಮನೆಯಿಂದ ತಂದ ಹಣವನ್ನೆಲ್ಲಾ ಕಳೆದುಕೊಂಡು ಬರಿ ಕೈಯಲ್ಲಿ ಮನೆಗೆ ಹೋಗುವುದೂ ಇದೆ. ಕೋಳಿ ಅಂಕದಿಂದ ಹಣ ಗಳಿಸುತ್ತೇವೆ ಎಂದು ಜನ ನಂಬುವುದು ತಪ್ಪೆಂದು ಕಾಣುತ್ತದೆ. ಕೋಳಿ ಅಂಕದಿಂದಲೇ ಶ್ರೀಮಂತರಾದವರು ಯಾರು ಇಲ್ಲ. ಒಮ್ಮೆ ಕಳೆದುಕೊಂಡದ್ದನ್ನು ಮತ್ತೊಮ್ಮೆ ತುಂಬಿಕೊಳ್ಳುತ್ತಾರೆ ಎಂಬುದಂತು ನಿಜ.

<u>ಸಮುದಾಯ ಪ್ರಜ್ಞೆ</u>: ಕೋಳಿಅಂಕದ ನೆಪದಲ್ಲಿ ಜನರು ಒಟ್ಟಾಗುತ್ತಾರೆ. ತಮ್ಮ ಕಷ್ಟ ಸುಖಗಳನ್ನು ಹಂಚಿಕೊಳ್ಳುತ್ತಾರೆ. ಕ್ಷೇಮ ಸಮಾಚಾರಗಳನ್ನು ವಿಚಾರಿಸಿಕೊಳ್ಳುತ್ತಾರೆ. ಜಾತಿ ಜಾತಿಗಳ ಮಧ್ಯೆ ಒಡೆದು ಹೋಗಿರುವ ಸಮಾಜವು ಕೋಳಿ ಅಂಕದ ಕಳದಲ್ಲಿಯೇ ಅನೇಕ ಜಗಳಗಳು ಪರಿಹಾರವಾದದ್ದು ಉಂಟು. ಎಷ್ಟೋ ಜಗಳಗಳು ಆರಂಭವಾದದ್ದು ಉಂಟು.

ಮೇಲಿನ ಕಾರಣಗಳು ಕೋಳಿಅಂಕಕ್ಕೆ ನಾಂದಿ ಆಗುವುದನ್ನು ಕಾಣುವುದು ಸಾಧ್ಯ. ಕೋಳಿಅಂಕ ಜನರ ಕ್ರೀಡೆಯಾಗಿ ಮನರಂಜನೆಯನ್ನು ನೀಡುವುದರಿಂದಾಗಿ ಹೆಚ್ಚು ಹೆಚ್ಚು ನಡೆಯುತ್ತಿರುವುದನ್ನು ಕಾಣಬಹುದು.

5.4: ತುಳವ ಸಂಸ್ಕೃತಿಯಲ್ಲಿ ಕೋಳಿಅಂಕದ ಸ್ಥಾನಮಾನ: ತುಳವ ಸಂಸ್ಕೃತಿಯಲ್ಲಿ ಕೆಲವು ಅಂಶಗಳಿಗೆ ವಿಶಿಷ್ಟವಾದ ಸ್ಥಾನಮಾನವಿದೆ. ಯಕ್ಷಗಾನ, ಭೂತಾರಾಧನೆ, ಕಂಬಳ ಮತ್ತು ಕೋಳಿಅಂಕಗಳು ಈ ನಿಟ್ಟಿನಲ್ಲಿ ಪ್ರಧಾನವಾದವು. ಅಲ್ಲಿಯ ಜನ ಈ ಮೇಲಿನ ನಾಲ್ಕು ಅಂಶಗಳನ್ನು ಅತ್ಯಂತ ಜತನದಿಂದ ಕಾಯ್ದು ಕೊಂಡು ಬಂದಿದ್ದಾರೆ ಮತ್ತು ಬರುತ್ತಿದ್ದಾರೆ. ಅವಕ್ಕೆ ಸ್ವಲ್ಪ ಧಕ್ಕೆಯಾದರೂ ಅಲ್ಲಿಯ ಜನ ಅದನ್ನು ಸೈರಿಸುವುದಿಲ್ಲ ಮತ್ತು ಈ ವಿಷಯಕ್ಕೆ ಸಂಬಂಧಿಸಿದ ಹಾಗೆ ಜನರು ವಯಸ್ಸು, ಜಾತಿ ಮತ್ತು ವರ್ಗಗಳನ್ನು ಗಮನಿಸುವುದಿಲ್ಲ. ಇವುಗಳಲ್ಲಿ ಅವಿದ್ಯಾವಂತರ ಜತೆ ವಿದ್ಯಾವಂತರು, ಬಡವರ ಜತೆ ಶ್ರೀಮಂತರೂ ಸೇರಿಕೊಳ್ಳುತ್ತಾರೆ. ಆದರೆ ಯಕ್ಷಗಾನ ಮತ್ತು ಭೂತಾರಾಧನೆಯಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಹೆಚ್ಚು ಪರಿಣಾಮಕಾರಿಯಾದುದು. ಕಂಬಳ ಮತ್ತು ಕೋಳಿಅಂಕದಲ್ಲಿ ಮಹಿಳೆಯರ ಭಾಗವಹಿಸುವಿಕೆ ಇಲ್ಲ ಅಥವಾ ತೀರಾ ಕಡಿಮೆ. ಈ ಅರ್ಥದಲ್ಲಿ ಕಂಬಳ ಮತ್ತು ಕೋಳಿಅಂಕಗಳು ತುಳುನಾಡಿನ ಗಂಡಸರ ಅವಶ್ಯಕತೆಗಳಿಗಾಗಿ ನಿರ್ಮಾಣಗೊಂಡಂತಿವೆ. ಅದೇನೆ ಇದ್ದರು ಕಂಬಳ, ಕೋಳಿಅಂಕಗಳು ತುಳುನಾಡಿನ ವರ್ಣರಂಜಿತ ಬದುಕಿನ ಎರಡು ಮುಖ್ಯ ಪ್ರಕಾರಗಳಾಗಿವೆ ಎಂಬುದನ್ನು ಅಲ್ಲಗಳೆಯುವಂತಿಲ್ಲ.

## 6. ಪ್ರಸಿದ್ಧ ಕೋಳಿಅಂಕಗಳು

ತುಳುನಾಡಿನ ಕೆಲವು ಪ್ರಸಿದ್ಧ ಕೋಳಿ ಅಂಕಗಳು ಕೆಳಗಿನಂತಿವೆ.

ಅಂಬಲಡ್ಕ: ಕುಂಬಳೆಯಿಂದ ಎಂಟು ಕಿಲೋಮೀಟರ್ ದೂರ ಇರುವ ಈ ಸ್ಥಳಗಳಲ್ಲಿ ಒಂದು. ಇಲ್ಲಿ ಏಪ್ರಿಲ್ ತಿಂಗಳಲ್ಲಿ ಕೋಳಿಅಂಕ ನಡೆಯುತ್ತದೆ. ತುಳುವಿನಲ್ಲಿ ಪಗ್ಗು ತಿಂಗಳು ಎಂದು ಕರೆಯುತ್ತಾರೆ. ಪಗ್ಗು 16ಕ್ಕೆ ಕೋಳಿ ಗೂಟವಾಗಿ ಪಗ್ಗು 21ಕ್ಕೆ ಇಲ್ಲಿ ಜಾತ್ರೆ ನಡೆಯುತ್ತದೆ. 5 ದಿನಗಳ ಕೋಳಿಅಂಕ ಇಲ್ಲಿ ಜರುಗುತ್ತದೆ.

'ಭಂಡಾರದ ಮನೆ' ಯಿಂದ ಕೋಳಿಅಂಕ ನಡೆಯುವ ಸ್ಥಳಕ್ಕೆ ಭಂಡಾರ ಹೋಗುತ್ತದೆ. ಇದನ್ನು 'ಕಿರುವಾಳ್ ಪೋಪುನಿ' ಎಂದು ಕರೆಯುತ್ತಾರೆ. 'ಕಿರುವಾಳು' ಬಹಳ ವಿಜೃಂಭಣೆಯಿಂದ ವಾಲಗ, ಸುಡುಮದ್ದುಗಳ ಜೊತೆಗೆ ದೈವಸ್ಥಾನದ ಬಳಿಗೆ ಹೋಗುತ್ತದೆ. ಇದರೊಂದಿಗೆ, ಊರಿನ ಯಜಮಾನ ಮತ್ತು ಊರಿನ ಹತ್ತು ಸಮಸ್ತರಿರುತ್ತಾರೆ. ಆ ದಿನ ತಂದ ಭಂಡಾರವನ್ನು ಕಿನ್ನಿಮಾನಿ — ಪೂಮಾಣಿ ದೈವಸ್ಥಾನದಲ್ಲಿಟ್ಟು ಪೂಜಿಸುತ್ತಾರೆ. ಮರುದಿನದಿಂದ ಕ್ರಮದಂತೆ ಬೆಳಗ್ಗೆ ಎಂಟುಗಂಟೆಯಿಂದ ಕೋಳಿಅಂಕ ಆರಂಭವಾಗುವುದು.

ಇಲ್ಲಿ ಭೂತಾರಾಧನೆ ಮತ್ತು ಕೋಳಿಅಂಕ ಜತೆ ಜತೆಯಲ್ಲಿ ನಡೆಯುತ್ತದೆ. ಸುಮಾರು ನಾಲ್ಕರಿಂದ ಐದು ಸಾವಿರ ಜನ ಈ ಜಾತ್ರೆಯಲ್ಲಿ ಭಾಗವಹಿಸುತ್ತಾರೆ. ಅಲ್ಲಿನ ಸುತ್ತಲ ಜನರಿಗೆ ಇದೊಂದು ಜಾತ್ರೆ. ಮಕ್ಕಳಿಗೆ ಆಟದ ಸಾಮಾನುಗಳ ಅಂಗಡಿ, ತೊಟ್ಟಿಲುಗಳು, ಹೆಂಗಸರಿಗೆ ಬಳೆ, ರಿಬ್ಬನ್‌ಗಳು, ಮನೆಗೆ ಬೇಕಾಗುವ ಸಾಮಾನುಗಳನ್ನು ವಿಕ್ರಯಿಸಲು ಅನೇಕ ಅಂಗಡಿಗಳಿರುತ್ತವೆ. ಕೃಷಿಯ ಸಲಕರಣೆಗಳ ಮಾರಾಟ, ಕೋಳಿಅಂಕದ ಜನರಿಗೆ ಬಾಳುಗಳ ಮಾರಾಟ ಇಲ್ಲಿ ನಡೆಯುತ್ತದೆ. ಹೋಟೇಲುಗಳು, ಸಣ್ಣ ಪುಟ್ಟ ಅಂಗಡಿಗಳು ಇರುತ್ತದೆ. ಒಟ್ಟಿನಲ್ಲಿ ಇಲ್ಲಿ 5 ದಿನ ಹಬ್ಬದಿಂದ ಕೂಡಿದ ವಾತಾವರಣವಿರುತ್ತದೆ.

ಎಲ್ಲಿ ನೋಡಿದರೂ ಜನ ಕೋಳಿಗಳನ್ನು ತರುವುದು, ಕೆಲವರು 'ಬಟ್ಟೆ' ಕೋಳಿ ಮತ್ತು ಬಂಟ ಕೋಳಿಗಳನ್ನು ಹಿಡಿದುಕೊಂಡು ಮನೆಗೆ ಹೋಗುವ ದೃಶ್ಯಗಳು ಕಣ್ಣಿಗೆ ರಾಚಿಸುತ್ತದೆ.

ಸರಕಾರದ ಕಾನೂನು ಪ್ರಕಾರ ಬೆಳಗ್ಗೆ ಎಂಟರಿಂದ ಸಂಜೆ ಆರರ ತನಕ ಮಾತ್ರ ಕೋಳಿಅಂಕ ನಡೆಸಬಹುದು. ಆದುದರಿಂದ ಸಂಜೆ ಆರರ ನಂತರ ಅನೇಕ ಮನರಂಜನ ಕಾರ್ಯಕ್ರಮಗಳನ್ನು ಊರಿನ ಜನ ಹಮ್ಮಿಕೊಳ್ಳುತ್ತಾರೆ. ನಾಟಕ, ಯಕ್ಷಗಾನ, ರಸಮಂಜರಿ ಕಾರ್ಯಕ್ರಮಗಳನ್ನು ನಡೆಸುವ ಮೂಲಕ 'ಕೋಳಿಅಂಕ' ವನ್ನು ಬಹಳ ವಿಜೃಂಭಣೆಯಿಂದ ನಡೆಸುತ್ತಾರೆ.

ಐದು ದಿನಗಳಲ್ಲಿ ನಡೆಯುವ ಈ ಅಂಕವನ್ನು ಆರಂಭದ ದಿನ, ಮಧ್ಯದ ದಿನ, ಮತ್ತು ಕೊನೆಯ ದಿನ ಎಂದು ವಿಂಗಡಿಸುತ್ತಾರೆ. ತುಳುವಿನಲ್ಲಿ ಸುರುತಕಟ್ಟ, ನಡುಕಟ್ಟ, ಕಡೆಕಟ್ಟ, ಎಂದು ಕರೆಯುತ್ತಾರೆ. 'ಕೀರುವಾಳು' ಇಳಿದ ನಂತರ ಅಂದರ ಭಂಡಾರ ಪುನ: ಭಂಡಾರದ ಮನೆಗೆ ಹೋದ ಮೇಲೆ ಮತ್ತು ಕೋಳಿಗೂಟ ವನ್ನು ತೆಗೆದ ನಂತರ ಇಲ್ಲಿ ಕೊನೆಯ ಅಂಕ ನಡೆಯುತ್ತದೆ. ಅದನ್ನು 'ಬನ್ನೆರೆ ಕಟ್ಟ' ಎಂದರೆ ಅತಿಥಿಗಳಿಗಾಗಿ ಮಾಡುವ ಅಂಕ. ದೂರದ ಊರಿನಿಂದ ಆ ಊರಿನ ಸಂಬಂಧಿಗಳ ಮನೆಗೆ ಅನೇಕ ಅತಿಥಿಗಳು ಬಂದಿರುತ್ತಾರೆ. ಅವರಿಗೆ ವಿಶೇಷ ರೀತಿಯ ಅಗುಡೆ ಮಾಡಲು ಆ ದಿನ ಕೋಳಿಗಳನ್ನು ಕಾಳಗ ಮಾಡಿಸಿ ಮನೆಗೊಯ್ಯುತ್ತಾರೆ. ಇದು ಸಂಜೆ ಮೂರು ಗಂಟೆಯಿಂದ ಆರಂಭವಾಗಿ ಆರಕ್ಕೆ ಮುಗಿಯುವುದರಿಂದಾಗಿ ವಿಶೇಷ ಜನ ಸೇರುವುದಿಲ್ಲ. ಆ ಊರಿನ ಜನರೇ ಇರುತ್ತಾರೆ.

ಕೋಳಿಅಂಕ ನಡೆಯುವ ಸಂದರ್ಭದಲ್ಲಿ ವಾಹನಗಳಲ್ಲಿ ಜನ ಮತ್ತು ಕೋಳಿ ಗಳು ಬರುವುದನ್ನು ನೋಡುವುದೇ ಸಂತೋಷ ನೀಡುತ್ತದೆ.

ಇಲ್ಲಿ ಸುತ್ತಲೂ ಮೈದಾನ ಮತ್ತು ಮರಗಳಿಂದ ಕೂಡಿರುವುದರಿಂದಾಗಿ

ಬಹಳ ನೆರಳು ಇರುತ್ತದೆ. ಕೋಳಿಅಂಕಕ್ಕೆ ಹೋದ ಯಾರೇ ಆಗಲಿ ಈ ಜಾಗವನ್ನು ಮರೆಯುವಂತಿಲ್ಲ.

<u>ಬೆದ್ರಪಳ್ಳ</u> : ಇದು ಪೆರ್ಲಕ್ಕೆ ಸಮೀಪ ಇರುವ ಸ್ಥಳ. ಇಲ್ಲಿಯೂ ಐದು ದಿನಗಳ ಕೋಳಿಅಂಕ ನಡೆಯುತ್ತದೆ. ಹಿಂದಿನ ಕಾಲದಲ್ಲಿ ಹಗಲು ರಾತ್ರಿಗಳೆನ್ನದೆ ಕೋಳಿಅಂಕ ನಡೆಯುತ್ತಿತ್ತು. ಆದರೆ ಈಗ ಕಾನೂನಿನಂತೆ ಆರು ಗಂಟೆಯ ಸಮಯಕ್ಕೆ ನಿಂತು ಹೋಗುತ್ತದೆ. ಈ ವರ್ಷ ನಡೆದ ವಿಶೇಷವೆಂದರೆ (1994) ಪೋಲೀಸಿನವರಿಂದ ಪರವಾನಿಗೆ ತೆಗೆದುಕೊಂಡು ಕೋಳಿಅಂಕ ನಡೆಸಬೇಕೆಂದು ನಿಯಮ. ಇದು ಪೋಲೀಸಿನವರ ಲಾಭಕ್ಕಾಗಿ ಇರುವ ಕಾನೂನು. ಆದರೆ ಈ ಸಲ ಪರವಾನಿಗೆ ಇಲ್ಲದೆ ಕೋಳಿಅಂಕ ನಡೆಯುತ್ತಿದ್ದಾಗ ಮೂರನೆಯ ದಿನ ಪೋಲೀಸರು ದಾಳಿ ನಡೆಸಿದರು. ಇದರಿಂದ ಸಂತೆಗಳು ಕೋಳಿಅಂಕಕ್ಕೆ ಹೋಗುವ ಜನ ಅಸ್ಥವ್ಯಸ್ಥವಾದರು ಎಂದು ವೀಕ್ಷಕರ ಅಭಿಪ್ರಾಯ. ಪೋಲೀಸರು ಬಂದಾಗ ಅಂಕ ನಡೆಸಿ ಎಂದು ಹೇಳಿದ ವ್ಯಕ್ತಿ ಪಿಲಿ ಚಾಮುಂಡಿ ದೈವದ ಕಾಣಿಕೆ ಡಬ್ಬಿಯನ್ನು ಹಿಡಿದುಕೊಂಡು ಓಡಿ ಹೋಗಿ ದೈವಸ್ಥಾನದಲ್ಲಿಟ್ಟರೆಂದೂ, ಅವರ ಹಿಂದೆಯೇ ವನ(ಬನ)ದಿಂದ ಒಂದು ಬೆಂಕಿ ಕಿಡಿ ಹೋಯಿತೆಂದೂ ಜನ ಹೇಳುತ್ತಾರೆ. ಹೀಗೆ ಹೋದ ಕಿಡಿ ಆ ವ್ಯಕ್ತಿ ಅವರ ಮನೆ ಸೇರುವ ಮೊದಲೇ ದೈವಸ್ಥಾನದ ಮಾಡಿನ ಮೇಲೆ ಬಿದ್ದು ಭೂತಕ್ಕೆ ಸಂಬಂಧಿಸಿದ ಆಭರಣಗಳೆಲ್ಲ ಸುಟ್ಟು ಹೋಯಿತೆಂದೂ, ಆದರೆ ಹತ್ತಿರದಲ್ಲಿದ್ದ ಮನೆಗೆ ಏನೂ ಆಗಿಲ್ಲ. ಭೂತದ ವಸ್ತುಗಳು ಮಾತ್ರ ಸುಟ್ಟಿರುವುದರಿಂದಾಗಿ ಇದು ಭೂತದ ಮಹಿಮೆ ಎಂದು ಜನ ನಂಬಿಕೊಂಡಿದ್ದಾರೆ.

ಐದು ದಿನ ನಡೆಯಬೇಕಾಗಿದ್ದ ಅಂಕ ಮೂರು ದಿನದಲ್ಲಿ ನಿಂತು ಹೋದ ಪರಿಣಾಮ ಇದು ಎನ್ನುತ್ತಾರೆ ಅಲ್ಲಿನ ಜನ. ಕೋಳಿಅಂಕ ನಡೆಸಿ ಎಂದು ಹೇಳಿದ ವ್ಯಕ್ತಿ ಇವುಗಳನ್ನೆಲ್ಲ ಕಂಡು ಹೆದರಿ ಒಂದು ತಿಂಗಳಲ್ಲಿ ಸತ್ತ ಘಟನೆಯೂ ನಡೆದಿರುವುದರಿಂದಾಗಿ ಆತ ಭೂತಕ್ಕೆ ಮೋಸ ಮಾಡಿದ ಪರಿಣಾಮ ಎಂದು ಜನರಾಡುತ್ತಿದ್ದಾರೆ.

ಹಿಂದಿನ ಕಾಲದಲ್ಲಿ ಇಲ್ಲಿ ನಡೆಯುತ್ತಿದ್ದ ಕೋಳಿಅಂಕಕ್ಕೆ ದೂರದ ಊರಿನಿಂದ ಜನ ಬರುತ್ತಿದ್ದರು. ಇಲ್ಲಿಯೂ ವಿಶೇಷ ಅಂಗಡಿಗಳು, ಮಡಿಕೆಗಳು ಬರುತ್ತವೆ. ಮಕ್ಕಳು ಹಟ ಮಾಡಿದಾಗ ನಿನಗೆ ಬೇ ದ್ದಾಪಳ್ಳ ಕೋಳಿಕಟ್ಟದಿಂದ ತೆಗೆದು ಕೊಡುತ್ತೇನೆ ಎಂದು ಹೇಳಿ ಸಮಾಧಾನ ಪಡಿಸುವುದೂ ಇದೆ. ಅಷ್ಟು ಪ್ರಚಲಿತವಾಗಿದೆ ಈ ಕೋಳಿಅಂಕ.

ಆ ಊರಿನ ಜನಕ್ಕೆ ಮತ್ತು ಪರಊರಿನವರಿಗೆ ಇಂತಹ ಪ್ರದೇಶಗಳು ಸಂತಸ ನೀಡುವ ಸ್ಥಳಗಳು.

<u>ಕೇಪು</u> ; ವಿಟ್ಲದಿಂದ ಕಾಸರಗೋಡಿಗೆ ಹೋಗುವ ರಸ್ತೆಯಲ್ಲಿ 4 ಕಿ.ಮೀ ಸಾಗಿ ಪೂರ್ವಕ್ಕೆ 2 ಕಿ.ಮೀ. ಹೋದಾಗ ಕೇಪು ಉಳ್ಳಾಲ್ತಿ ದೈವಸ್ಥಾನ ಸಿಗುತ್ತದೆ. ಇಲ್ಲಿ ಐದು ದಿನಗಳ ಕೋಳಿಅಂಕ ನಡೆಯುವುದು ರೂಢಿ. ಇಲ್ಲಿನ ವಿಶೇಷವೆಂದರೆ 'ಯಾರೂ ಜೂಜು ಕಟ್ಟುವಂತಿಲ್ಲ', ಕೋಳಿಗಳನ್ನು ತಂದು ಪತಿ ಮಾಡಿ, ಕಾಳಗ ನಡೆಸಿ 'ಒಟ್ಟೆ' 'ಬಂಟ' ಮಾಡಿಕೊಂಡು ಹೋಗಬೇಕು. ಚರ್ಚೆ, ಜಗಳಗಳಿಗೆ ಇಲ್ಲಿ ಅವಕಾಶವಿಲ್ಲ. ಬೆಳಗ್ಗಿನಿಂದ ಸಂಜೆಯತನಕ ನಡೆಯುವ ಈ ಕೋಳಿಅಂಕ ಆಸಕ್ತರಿಗೆ ವಿಶೇಷ ಹಬ್ಬವನ್ನಾಗಿಸುತ್ತದೆ. ಆರುಗಂಟೆಯ ನಂತರ ಇಲ್ಲಿ ಕೋಳಿಅಂಕ ನಡೆಸುವಂತಿಲ್ಲ. ಇದಕ್ಕೆ ಯಾವ ಸರಕಾರದ ಕಾನೂನು ಈ ತನಕ ಅಡ್ಡ ಬಾ ರದಿರುವುದರಿಂದಾಗಿ ಇಂದೊಂದು ಕುತೂಹಲ ಮೂಡಿಸುವ ತಾ[illegible]ವಾಗಿದೆ.

ಇಲ್ಲಿ ಸಂತೆಗಳಿಲ್ಲ, ಅಂಗಡಿಗಳಿಲ್ಲ, ವ್ಯಾಪಾರದ ಮಾತು ಇಲ್ಲಿ ನಡೆಯುವುದಿಲ್ಲ. ಧರ್ಮಾರ್ಥವಾಗಿ ಎಳನೀರು, ಮಜ್ಜಿಗೆ ನೀರು, ಪಾನಕಗಳನ್ನು ಹಂಚುವುದಕ್ಕೆ ಅಭ್ಯಂತರ ಇಲ್ಲ ಇಲ್ಲ. ವ್ಯಾಪಾರ ಮಾಡಿದ ವ್ಯಕ್ತಿ ಉದ್ಧಾರವಾಗಲಾರ ಎಂಬ ನಂಬಿಕೆ ಇಲ್ಲದೆ. ರಕ್ತಬಿಂದು ಭೂಮಿಗೆ ಬಿದ್ದು ಗಣಗಳಿಗೆ ತೃಪ್ತಿ ಪಡಿಸುವ ಉದ್ದೇಶ ಮಾತ್ರ, ಇಲ್ಲಿ ಇರುವುದು ಜೂಜು ನಡೆಯದಿರುವುದರಿಂದಾಗಿ ಸಾಬೀತಾಗುತ್ತದೆ. ಜೂಜು ಇಲ್ಲದೆ ನಡೆಯುವ ಅಂಕಕ್ಕೂ ಜನ ಹೋಗುವುದನ್ನು ಕಂಡರೆ ಜನರಿಗೆ

ದೈವದ ಮೇಲಿರುವ ಭಕ್ತಿ ಮತ್ತು ಪ್ರೀತಿ ಕಾರಣ ಎಂದು ಕಾಣುತ್ತದೆ.

<u>ಬಲ್ನಾಡು</u> : ಪುತ್ತೂರು ಮಹಾಲಿಂಗೇಶ್ವರ ದೇವರ ಜಾತ್ರೆ ಕಡಿದು ಕೊಡಿ ಇಳಿಸಿದ ಮರುದಿನ ಬಲ್ನಾಡಿನಲ್ಲಿ ಉಳ್ಳಾಲ್ತಿ, ದಂಡನಾಯಕ ದೈವಕ್ಕೆ ಗೊನೆ ಕಡಿಯುವುದು ಕ್ರಮ. ಗೊನೆ ಕಡಿಯುವುದು ಎಂದರೆ 'ನಾಂದಿ' ಹಾಕುವುದು ಎಂದರ್ಥ. ಅದು ಮುಗಿಯುವ ತನಕ ಆ ಊರಿನಲ್ಲಿ ಹಿಂಸೆ ಮಾಡಬಾರದು ಎಂಬ ನಿಯಮ ಇದೆ. ನೇಮ ನಡೆಯುವ ಮೂರು ದಿನ ಮೊದಲು ಮಲರಾಯ ದೈವಕ್ಕೆ ಮುಂಡ್ಕೆ ಹಾಕುವ ಕ್ರಮ ಇದೆ. ಇದೆಲ್ಲ ಕಳೆದ ಮೇಲೆ ಬಲ್ನಾಡು ಗ್ರಾಮದ ಬಲ್ಲವರು ಮತ್ತು ಅದೇ ಗ್ರಾಮದ ಕಟ್ಟೆಮನೆಯ ಗೌಡರು ಬೆಳಿಗ್ಗೆ 9 ರಿಂದ 10 ಗಂಟೆಯ ಒಳಗಾಗಿ ಕೋಳಿಗೂಟದ ವಿಧಿಯನ್ನು ಪೂರೈಸುತ್ತಾರೆ. ಇಲ್ಲಿ 9 ಗೂಟಗಳನ್ನು ಬಳಸುತ್ತಾರೆ. ಕೋಳಿಗೂಟ ವಿಧಿಗೆ ತರುವ ಕೋಳಿಗಳಲ್ಲಿ ಪತಿ ಸರಿಯಾಗಿರಬೇಕೆಂಬ ನಿಯಮ ಇಲ್ಲಿ ಇಲ್ಲ. 4 ಗೂಟಕ್ಕೆ ಒಂದು ಕೋಳಿಯನ್ನೂ, ಮತ್ತೊಂದು ಕೋಳಿಯನ್ನು ಉಳಿದ ನಾಲ್ಕು ಗೂಟಕ್ಕೂ ಹಗ್ಗದಿಂದ ಸುತ್ತಿ, ಆಮೇಲೆ ಎದುರೆದುರು ಹಾರಿಸಿ ಗೂಟದ ಕ್ರಮ ಮಾಡುತ್ತಾರೆ. ಗೂಟದ ವಿಧಿ ನಡೆದ ಮೇಲೆ ಕೋಳಿಅಂಕ ಆರಂಭವಾಗುತ್ತದೆ.

ಸಂಜೆ ಬೆಳಕು ಉರಿಸಿದ ನಂತರ ಇಲ್ಲಿ ಕೋಳಿಅಂಕ ನಡೆಸುವಂತಿಲ್ಲ. ಕೋಳಿಗೂಟದ ಕೋಳಿಗೆ ಜೂಜು ಕಟ್ಟುವ ಕ್ರಮವು ಇಲ್ಲ.

ಸುಮಾರು 25 ವರ್ಷಗಳ ಮೊದಲು ಇಲ್ಲಿ ಐದು ದಿನಗಳ ಕೋಳಿಅಂಕ ನಡೆಯುತ್ತಿತ್ತಂತೆ. ಈಗ ಮೂರು ದಿನಗಳ ಕೋಳಿಅಂಕ ಮಾತ್ರ ನಡೆಯುತ್ತದೆ. ಹೀಗೆ ಮೂರು ದಿನಗಳ ಅಂಕ ನಡೆದ ಮೇಲೆ ಹತ್ತನಾವಧಿಯ ತಂಬಿಲದ ಮರುದಿನ ಇದೇ ಸ್ಥಳದಲ್ಲಿ ಮೂರು ದಿನಗಳ ಕೋಳಿ ಅಂಕ ನಡೆಯುವುದು.

ಇಲ್ಲಿಗೂ ದೂರದ ಊರಿನಿಂದ ಜನ ಬರುತ್ತಾರೆ. ಹಿಂದೆ ಇಲ್ಲಿಯೂ ಜೂಜು ಕಟ್ಟುತ್ತಿರಲಿಲ್ಲವಂತೆ. ಆದರೆ ಈಚೆಗೆ ಇಲ್ಲಿ ಜೂಜು ಕಟ್ಟುವುದು ಆರಂಭವಾಗಿದೆಯಂತೆ. ಆದರೆ ವ್ಯಾಪಾರ ಇಲ್ಲಿ ನಡೆಸುವಂತಿಲ್ಲ. ಭೂತದ ನುಡಿಕಟ್ಟನ್ನು ಜನ ಹೀಗೆ ನೆನಪಿಸುತ್ತಾರೆ ''ಆಯುಷ್ಯದೆಪ್ಪುಜಿ, ಭವಿಷ್ಯ ದೆಪ್ಪುವೆ'' (ಆಯುಷ್ಯ ತೆಗೆಯುವುದಿಲ್ಲ, ಭವಿಷ್ಯ ತೆಗೆಯುತ್ತೇನೆ.) ಭೂತದ ಈ ಮಾತಿನಿಂದ ಜನ ಹೆದರಿಕೊಂಡು ಬಹಳ ಭಕ್ತಿಯಿಂದ ನಡೆದುಕೊಳ್ಳುತ್ತಿರುವುದು ಇಲ್ಲಿ ಕಂಡುಬರುವ ದೃಶ್ಯ.

ತುಂಬೆಯ ರಾಮಲಕಟ್ಟೆ: ಬಂಟ್ವಾಳ ತಾಲೂಕಿನ ಪ್ರಸಿದ್ಧ ಕೋಳಿಅಂಕದ ಸ್ಥಳ. ಇಲ್ಲಿ ಏಳು ದಿನಗಳ ಕೋಳಿಅಂಕ ಷಷ್ಠಿಯ ಸಂದರ್ಭದಲ್ಲಿ ನಡೆಯುತ್ತದೆ. ಐದರಿಂದ ಏಳು ಸಾವಿರ ಜನ ಸೇರಬಹುದಾದ ಈ ಸ್ಥಳದಲ್ಲಿ ಏಳು ದಿನಗಳಲ್ಲೂ ವಿವಿಧ ಕಾರ್ಯಕ್ರಮಗಳನ್ನು ಕೋಳಿಅಂಕದೊಂದಿಗೆ ಹಮ್ಮಿಕೊಳ್ಳುತ್ತಾರೆ. ಹೆಂಗಸರು, ಮಕ್ಕಳು ಸೇರಿದಂತೆ ಎಲ್ಲರಿಗೂ ಆನಂದ ನೀಡುವ ಈ ಜಾತ್ರೆ ಗಂಡಸರ ಕ್ರೀಡಾ ಕೇಂದ್ರ. ದೂರದ ಊರಿನಿಂದ ಮಾರುತಿ ಕಾರು, ಜೀಪುಗಳಲ್ಲಿ ಅಂಕಕ್ಕೆ ಜನ ತರುವುದನ್ನು ನೋಡುವುದೇ ಖುಷಿ. ಊರಿನ ಜನ ಅಂಕಕ್ಕಾಗಿ ತುಂಬಾ ಸಮಯದಿಂದ ಕೋಳಿಗಳನ್ನು ತಂದು ಸಾಕಿ ಅಂಕಕ್ಕೆ ತರುವುದನ್ನು ನೋಡಿದರೆ ಗ್ರಾಮದ ಜನರ ಉತ್ಸಾಹ ಅರ್ಥವಾಗುತ್ತದೆ.

ಏಳು ದಿನಗಳಲ್ಲಿಯೂ ವಿವಿಧ ಮೇಳಗಳಿಂದ ಯಕ್ಷಗಾನ ನಡೆಯುತ್ತದೆ. ನಾಟಕಗಳು ನಡೆಯುತ್ತವೆ. ಒಂದೊಂದು ಗ್ರಾಮದ ಜನರಿಗೆ ಖುಷಿ ನೀಡುವ ಈ ರೀತಿಯ ಜಾತ್ರೆಗಳಿಗೆ ಸರಕಾರ ಪೂರ್ತಿ ಕಡಿವಾಣ ಹಾಕಿದರೆ ಜನ ಮನರಂಜನೆಯನ್ನು ಕಳೆದುಕೊಳ್ಳುವ ಸಾಧ್ಯತೆ ಇದೆ.

ಇರ್ದೆ : ಪುತ್ತೂರು ತಾಲೂಕಿನ ಈ ಸ್ಥಳದಲ್ಲಿ ಐದು ದಿನಗಳ ಅಂಕ ನಡೆಯುತ್ತದೆ. ಇಲ್ಲಿಯೂ ಯಕ್ಷಗಾನ ನಾಟಕಗಳು ನಡೆಯುತ್ತವೆ. ಸಂತೆಗಳಿರುತ್ತವೆ.

ಗಂಡಸರಿಗೆ ಕೋಳಿಅಂಕವಾದರೆ, ಹೆಂಗಸರಿಗೆ ವ್ಯಾಪಾರ ಕೇಂದ್ರಗಳೇ ಮುಖ್ಯ ವಾಗುತ್ತದೆ. ರಾತ್ರಿಯ ಮನರಂಜನೆಯ ಕಾರ್ಯಕ್ರಮದಲ್ಲಿ ಹೆಂಗಸರು ಮಕ್ಕಳು ಮುಖ್ಯವಾಗಿ ಭಾಗಿಯಾಗುತ್ತಾರೆ. ಗಂಡಸರು ಬರುವುದುಂಟು. ಆದರೆ ಹಗಲಿನ ಮನರಂಜನೆಯ ಆಯಾಸ ಅವರನ್ನು ಕಾಡುವುದರಿಂದ ಗಂಡಸರ ಸಂಖ್ಯೆ ಕಡಿಮೆ ಯಾಗಿರುವುದು ಇದೆ.

ಪುತ್ತೂರು ಮಹಾಲಿಂಗೇಶ್ವರ ದೇವಸ್ಥಾನದ ಮಣಿಯಂದ ಏಳ್ನಾಡಿನ ಪ್ರತಿಯೊಂದು ಸ್ಥಳಗಳಲ್ಲೂ ಕೋಳಿಅಂಕ ನಡೆಯಬೇಕೆಂಬ ನಿಯಮವಿತ್ತು. ಪ್ರತಿ ಸ್ಥಳ ಗಳಲ್ಲೂ ಐದು ದಿನಗಳ ಕೋಳಿಅಂಕ ಈಗಲೂ ನಡೆದು ಬರುತ್ತಿರುವುದನ್ನು ಕಾಣ ಬಹುದು. ಪುತ್ತೂರು, ಕುಂಬ್ರ, ಬುರ್ಲೇರಿ ಕಟ್ಟೆ, ಪುಣಚ, ಈ ಮುಂತಾದ ಕಡೆಗಳಲ್ಲಿ ಅಂಕಗಳು ಜಾತ್ರೆ ಕಳೆದ ನಂತರ ನಡೆಯುವುದನ್ನು ಕಾಣಬಹುದು.

ಮಂಗಳೂರಿನ ಕುತ್ತಿಮುಗೇರು : ಇದು ಕೂಡ ಅಂಬಲಡ್ಕದಂತೆಯೇ ಪ್ರಸಿದ್ಧ ವಾದ ಕೋಳಿಅಂಕ ನಡೆಯುವ ಸ್ಥಳ. ಇಲ್ಲಿಯೂ ಐದು ದಿನಗಳ ಕೋಳಿಅಂಕ ಸರ್ವ ರೀತಿಯ ವ್ಯಾಪಾರ ವ್ಯವಹಾರಗಳಿಂದ ನಡೆಯುತ್ತದೆ.

ನೆಲ್ಲೂರುಪೊಲುತ್ತಡಿ : ಇದು ಕೂಡ ಕಾಸರಗೋಡ ಜಿಲ್ಲೆಯ ಪ್ರಸಿದ್ಧ ಕೋಳಿ ಅಂಕದ ಸ್ಥಳ. ಈ ಅಂಕವನ್ನು ಬಂಬ್ರಾಣದ ಬಂಟರು ನಡೆಸುತ್ತಿದ್ದರಂತೆ. ಈಗಲೂ ನಡೆಸುತ್ತಾರೆ. ಆದರೆ ಅಧಿಕಾರ ಹಿಂದಿನ ಕಾಲದಷ್ಟು ಇವರ ಕೈಯಲ್ಲಿ ಇದ್ದಂತಿಲ್ಲ.

ಸುಳ್ಯದ ಬೊಳ್ಳೆಕೇರಿ : ಇದು ಕೂಡ ಒಂದು ಪ್ರಸಿದ್ಧ ಕೋಳಿಅಂಕದ ಸ್ಥಳ. ಇಲ್ಲಿಯೂ ಐದು ದಿನಗಳ ಕೋಳಿಅಂಕ ನಡೆಯುತ್ತದೆ. ಇಲ್ಲಿಯ ಅಂಕದಲ್ಲಿ ಭಾಗವಹಿಸುವುದೇ ಒಂದು ಪ್ರತಿಷ್ಠೆ ಎಂದು ಜನ ಭಾವಿಸುತ್ತಾರೆ. ಇಲ್ಲಿಗೂ ದೂರದ ಊರಿನಿಂದ ಜನ ವಾಹನಗಳಲ್ಲಿ ಬಂದು ಅಂಕ ನಡೆಸಿಕೊಂಡು ಸಂತೋಷದಿಂದ

ಹೋಗುವುದನ್ನು ಕಾಣಬಹುದು.

ಇದೇ ರೀತಿಯಲ್ಲಿ ಕುಂದಾಪುರ, ಕಡ್ಲೂರು, ಉಡುಪಿ, ಮುಂಗಳೂರು, ಕಾರ್ಕಳ, ವಿಟ್ಲ, ಬೆಳ್ತಂಗಡಿ, ಕುಂಬಳೆ, ಬದಿಯಡ್ಕ, ಪೆರಡಾಲ, ಪೆರ್ಲ, ಅಡ್ಯನಡ್ಕ, ಬೆಳ್ಳಾರೆ, ಕೈಕಂಬ, ಪೊಳಲಿ, ಕಂಕನಾಡಿ, ಪೈಕ, ಚೆರಗೋಳಿ, ತಲಪಾಡಿ, ಬೆಳಿಂಜ, ಬೆದ್ರಡ್ಕ , ಪುತ್ತಿಗೆ, ಪಾವೂರು ಮುಂತಾದ ಕಡೆಗಳಲ್ಲಿ ಕೋಳಿಅಂಕಗಳು ನಡೆಯುತ್ತವೆ.

ತುಳುನಾಡನ್ನು ಸುತ್ತಿದರೆ ಕೋಳಿಅಂಕ ನಡೆಯುವ ಸ್ಥಳಗಳನ್ನು ಕಾಣುವುದು ಸಾಧ್ಯವಿಲ್ಲ. ಎಲ್ಲೆಂದರಲ್ಲಿ ಕೋಳಿಅಂಕಗಳು ಒಂದಲ್ಲ ಒಂದು ಕಾರಣದಿಂದ ನಡೆಯುತ್ತಿರುತ್ತದೆ.

# 7. ಸಮಾರೋಪ

ಕೋಳಿಅಂಕದ ಬಗೆಗೆ ನಡೆಸಿದ ಅಧ್ಯಯನದಿಂದ ಈ ಕೆಳಗಿನ ಅಂಶಗಳು ಸ್ಪಷ್ಟವಾಗುತ್ತವೆ.

1) ಕೋಳಿಅಂಕವು ಭಾರತದಲ್ಲಿ ಬಹಳ ಪ್ರಾಚೀನ ಕಾಲದಿಂದಲೂ ಅಸ್ಥಿತ್ವದಲ್ಲಿತ್ತು. ಸಂಸ್ಕೃತ ಮತ್ತು ಕನ್ನಡದ ಕವಿಗಳು ಕೋಳಿಅಂಕದ ಬಗೆಗೆ ಸಾಕಷ್ಟು ಉಲ್ಲೇಖ ಮಾಡಿದ್ದಾರೆ.

2) ತುಳುನಾಡಿನ ಭಾಗೋಳಿಕತೆ ಕೋಳಿಅಂಕಕ್ಕೆ ಪ್ರಶಸ್ತವಾದ ಒಂದು ವಾತಾವರಣವನ್ನು ನಿರ್ಮಾಣ ಮಾಡಿದೆ.

3) ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಅಸ್ಥಿತ್ವ ಕೋಳಿಅಂಕಕ್ಕೆ ಅಗತ್ಯವಾದೊಂದು ವಾತಾವರಣವನ್ನು ನಿರ್ಮಿಸಿ ಕೊಟ್ಟಿದೆ.

4) ಭೂತಾರಾಧನೆಯ ಜನಪ್ರಿಯತೆ ಕೋಳಿಅಂಕದ ಜನಪ್ರಿಯತೆಗೂ ಕಾರಣವಾಗಿದೆ.

5) ತುಳುನಾಡಿನ ಜನರ ಆದಾಯ ಕೋಳಿಅಂಕದ ಜೂಜುವಿನ ಮೇಲೆ ಪರಿಣಾಮ ಬೀರಿದೆ.

6) ಕೋಳಿಅಂಕವನ್ನು ತುಳುನಾಡಿನ ಜನರು ಬಹಳ ಪ್ರೀತಿಯಿಂದ ಮತ್ತು ತೀವ್ರತೆಯಿಂದ ಉಳಿಸಿಕೊಂಡು ಬಂದಿದ್ದಾರೆ.

7) ಕೋಳಿಅಂಕದ ಬಗೆಗಿನ ಸಾಹಿತ್ಯದಲ್ಲಿ ಕೋಳಿಯ ಜಗಳಗಂಟಿತನ ಮತ್ತು ಅಹಂಕಾರವೇ ಹೆಚ್ಚು ಅನಾವರಣಗೊಂಡಿದೆ.

8) ತುಳುನಾಡಿನ ಎಲ್ಲ ಜನರು ಕೋಳಿಅಂಕದಲ್ಲಿ ಭಾಗವಹಿಸುವವರಾದರೂ ಅದರಲ್ಲಿ ಬಂಟರ ಭಾಗವಹಿಸುವಿಕೆ ಹೆಚ್ಚಿನದು.

9) ಕೋಳಿಅಂಕಕ್ಕೆ ಸಾಮಾಜಿಕ, ಧಾರ್ಮಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಕಾರ್ಯಗಳನ್ನು ನಿರ್ವಹಿಸುವ ಶಕ್ತಿ ಇದೆ. ಆದ್ದರಿಂದಲೇ ತುಳುವ ಸಂಸ್ಕೃತಿಯಲ್ಲಿ ಕೋಳಿಅಂಕಕ್ಕೆ ವಿಭಿನ್ನವಾದ ಸ್ಥಾನಮಾನ ಒಂದು ಲಭ್ಯವಾಗಿದೆ.

10) ಕೇಪು, ಬೊಬ್ಬಕೇರಿ, ತುಂಬೆ, ರಾಮಲಕಟ್ಟೆ, ಅಂಬಲಡ್ಕ, ಬೆದ್ರಂಪಳ್ಳ, ಬಲ್ನಾಡು, ಬೆಳಿಂಜ, ತಲಪಾಡಿ ಮೊದಲಾದವು ತುಳುನಾಡಿನ ಪ್ರಸಿದ್ಧ ಕೋಳಿ ಅಂಕಗಳಾಗಿವೆ.



ಅನುಬಂಧ

---

1. <u>ಕೋಲೆಯಾಟದ ಸಾಹಿತ್ಯ</u>

1.1: ಹಾಡು

1.2: ಪಂಚಾಂಗ

1.3: ಕೋಲೆಯಾಟದ ಆಮಂತ್ರಣ ಪತ್ರಿಕೆ.

2. <u>ನಿರೂಪಕರ ಪಟ್ಟಿ</u>

3. <u>ಪರಾಮರ್ಶನ ಗ್ರಂಥಗಳು</u>

3.1: ಕನ್ನಡ

3.2: ಇಂಗ್ಲೀಷ್ ಗ್ರಂಥಗಳು

4. <u>ಕೋಲೆಯಾಟದ ಚಿತ್ರಗಳು</u>

1.1. ಹಾಡು :

## ಕೋರಿದ ಕಟ್ಟದ ಲಾವಣಿ

ರಚನೆ: ಕೆ. ಈಶ್ವರ ಆಳ್ವ, ಪಂಜ
ಹೇಳಿದವರು: ಮಹಾಬಲ ಶೆಟ್ಟಿ. ಡಿ.

ಅಜನಡ್ಕದ ಕೋರಿದಕಟ್ಟ ಬಾರಿಕಟ್ಟಕೇನ್ಲೆಂತೋ
ಊರುಡೆ ಇಂಚಿ ಕೋರಿಕಟ್ಟ ತೂತಜಪನ್ಪ ಕೇನ್ಲೆಂತೋ
ಸಾರಕಟ್ಲೆಡ್ ಕೂಡದರ್ ಜನಕುಲ್ ಎಣ್ಕೆ ಬೂರಂಡಲಾ ಊದರಂದ್
ಕೋರಿ ಬುಡುಪಿನ ಗಲಾಟೆಡ್ ಅವುಲ್ಗುಂಡು ಪಾಡೆಂಡಲಾ ಕೇನಂದ್
ಪರ್ಬದ ಕಟ್ಟಗ್ ಬತ್ತ್ದ ಕೋರಿಲ್ ಬೊಳ್ಳ, ಮೈಪೆ,·ಕೆಮ್ಮೈರ,
ಕಬೆರ್ಳ್ಳ, ಕಾವೆ, ಮಂಜಳಗಿಡಿಂತು, ಸಾಸ್ತ್ರ ಕೊಟುವ್ದ ಪೆರಡಿಂಗೆ
ಂತೂನಲಾಬಂಜಿ ಕೋರಿಗೆತೊಂದು ಕಟ್ಟೆರೆಪೋಂತು ಬೊಕ್ಕತೂಲೆ
ಬಾರಿಕೋರಿ ಕುಪ್ಪುಲ್‌ಕಾವೆ ಕೆಂಪುದಕಂಚೆಲ್ ಕೊಟ್ಟೈಕ್
ಇಡೀಕಾ ತೂಂಡಲಾ ಎನ್ನಕೋರಿಗ್ ಪತಿಂತೋ ಅಂತುಜಿ ಅವುಲ್ತೂಲೆ
ಕಡೆಕ್ ಒಂಜಿ ಉರಿಂತುಕೋರಿಂತೋ ಸುವೂರೆಡ್ ಪತಿಂತೋ ಅಂಡ್ ಅವುಲ್ತೂಲೆ
ಕಾಳಪ್ಪಣ್ಣನ್ ಲೆತ್ತ್ದ್ ಕೋರಿದ ಕಾರೆಗ್ ಕಟ್ಟೆಂಡ್ ಬಾಳ್‌ತೂಲೆ
ಬಾಳಪ್ಪಣ್ಣಿ ಎದುರುದ ಕೋರಿಗ್ ಬಾಳ್‌ಕಟ್ಟೈರ್ ಬೊಕ್ಕತೂಲೆ
ಬಾಳಪ್ಪಣ್ಣಿ ಬತ್ತ್ದ್ ಐನ್ ದೂದು ಕಟ್ಟೈರೆ ಕೇಂಡೆ ರೆತೂಲೆ
ಐನ್ ರೂಪಾಂತು ದೂದು ಮಲ್ತ್ದ್ ದೂದು ಕಟ್ಟೈಂತೂನ್ ಬೊಕ್ಕತೂಲೆ
ಬುಡಿಂತುರ್ ಕೋರಿ ಪಾಡಿಂತುರ್ ಬೊಬ್ಬೆ ಅಲಾವೊಟ್ಯ ಕಾವಂದ್
ಕಾರದೆರ್ತದ ಇರುವೊಲಾವೊಟ್ಯ, ಎದುರ್ದ ಕೋರಿಗ್ ಪೆಟ್ಟ್ಂಡ್
ದೆತ್ತ್ರ್ ಕೋರಿ ಪಾಡ್ಯೆಂತುರ್ ಗಾಳಿ ಲೆತ್ತ್ರ್ ಕರಿಂತುವೂನಾಂದ್
ನೆತ್ತ್ರ್ ಬರುಪುನ ಗಾಂತುನ್ ಸೀಳ್‌ದ್ ಪೋರೆಗ್ಗರ್ ಕೋರಿ ಉಷಾರಾಂಡ್
ಎನ್ನ ಕೋರಿಂತೋ ಕಾದುಂಡ್ ಇಂದಿದ್ ಎನ್ನ ಮನಸ್ಸ್‌ಡ್ ನಿಜವುಂಡು
ಎನ್ನನಗ ಎನ್ನ ಮನಸ್ಸ್‌ಡ್ ಸಂತಸ ಉಕ್ಕ್‌ದ್ ಬರ್ಪುಂಡು
ಕಡೆಕ್ ಒರೊ ಬುಡಿಂತುರ್ ಕೋರಿ ಎನ್ನಕೋರಿಂತೋ ತೈತೆಪೊಂಡು

ಬಂಜಿಗ್ ಬೀಸತ್ತಿ, ಪಾಡಿನಂಚನೆ ಎನ್ನ ಬಂಜಿಗಲಾ ಬೇನೇಂಡ್

ಕೋರಿಲಾ ಒಂಜಿ, ರೂಪಾಯಿ ಐನ್, ಪತ್ತ್, ರೂಪಾಯಿಗ್ ಗಸಿಯಾಂಡ್

ಕಾಪಿ ಪರಿಯೆರ ಕಾಸ್ಜ್ಜಾಂದೆ ಪಾಪರಿಯಾದ್ ಪೋದಾಂಡ್

ಕೋರಿಕಟ್ಟಡ್ದ್ ಬತ್ತ್‌ದ್ ಈಶ್ವರ ಆಳ್ವರೆಡ ಪಂಡೆ ಈ ಕತೆನ್

ಬಾರೀ ನೋಕುಡೆ ವುಲ್ತ್‌ದ್ ಬರೆಯೆರ್ ಕೋರಿದ ಕಟ್ಟದ ಲಾವಣಿನ್

( 19-3-1994 ರಂದು ನೆಟ್ಲ ದೇವಸ್ಥಾನ, (ಬಂಟ್ವಾಳ ತಾಲೂಕು) ದ ಜಾತ್ರೆಯ ನಂತರ ನಡೆದ 'ಕೋರಿದ ಕಟ್ಟ' ದ ಸಂದರ್ಭದಲ್ಲಿ ಈ ಹಾಡನ್ನು ಸಂಗ್ರಹಿಸಲಾಗಿದೆ )

## 1.2. ಪಂಚಾಂಗ:

### ಶುಕ್ಲಪಕ್ಷ

### ಪಾಡ್ಯ — ಬುಧವಾರ

ಕಜಕ್ಕಪಂಚನಿಗೆ — ಕೆಂಪ ರಾಜ

ಮೈಪ್ಪನಿಗೆ — ಕಜಕ್ಕ ರಾಜ

ಮೈಪ್ಪಕರುಬೊಳ್ಳಗೆ — ಮಂಜಳಕೆಂಪ ರಾಜ

ಬೊಳ್ಳಗೆ — ಕರುಬೊಳ್ಳ ರಾಜ

ಬೊಳ್ಳಗೆ — ಉರಿಂತುಪೆರಡಿ ರಾಜ

ಹಳದಿ ಗಿಡಿಂತುಗೆ — ಬಿಳಿಕರುಬೊಳ್ಳ ರಾಜ

### ಆದಿತ್ಯವಾರ

ಮೈಪ್ಪನಿಗೆ — ಕೆಂಪ ರಾಜ

ಕಜಕ್ಕಪಂಚನಿಗೆ — ಕೆಮ್ಮೈರ ರಾಜ

ಮೈಪ್ಪನಿಗೆ — ಕೆಮ್ಮೈರಕುಪ್ಲ ರಾಜ

ಕಾವೆಗೆ — ಬೊಳ್ಳ ರಾಜ

ಕಾವೆಗೆ — ಕೆಂಪುಗಿಡಿಂತು ರಾಜ

ಬಿಳಿಕಾವೆಗೆ — ಬಿಳಿಕಡಲೆಗಿಡಿಂತು ರಾಜ

### ಶುಕ್ರವಾರ

ಪಂಚನಿಗೆ — ಕೆಮ್ಮೈರಬೂದಿಗಿಡಿಂತು ರಾಜ

ಕಾವೆಗೆ — ಬಿಳಿಗಿಡಿಂತು ರಾಜ

ಕಾವೆಪೆರಡಿಗೆ — ಕರುಬೊಳೆ ರಾಜ

ಕಪ್ಪುಗಿಡಿಂತುಗೆ — ಕೆಮ್ಮೈರಪೆರಡಿ ರಾಜ

ಕೆಮ್ಮೈರಪೆರಡಿಗೆ — ಕೆಮ್ಮೈರಕುಪ್ಲೆ ರಾಜ

ಗೆಂಡಬೊಳ್ಳಗೆ — ಸಾಸ್ರುಬೊಳೆ ರಾಜ

## ಶುಕ್ಲಪಕ್ಷ

### ಬಿದಿಗೆ — ಸೋಮವಾರ

ಪಂಚನಿಗೆ — ಕೆಮೆಟ್ಟ್ಯರ ರಾಜ

### ಶುಕ್ರವಾರ

ಗರುಡಕಾವೆಗೆ — ಕಪ್ಪುಬೂದಿ ರಾಜ

ಮುಂಜಳಕೆಂಪು — ಉರಿಂತುಕುಪ್ಲ ರಾಜ

ಮುಂಜಳಉರಿಂತುಗೆ — ಸಾಸ್ತ್ರುಕರುಬೊಳ್ಳೆ ರಾಜ

ಉರಿಂತುಗೆ — ಕುಪ್ಲ ರಾಜ

ಸಜಕ್ಕನಿಗೆ — ಕರುಬೊಳ್ಳೆ ರಾಜ

## ಶುಕ್ಲಪಕ್ಷ

### ತದಿಗೆ — ಶುಕ್ರವಾರ

ಹಳದಿಕೆಂಪನಿಗೆ — ಮೆಟ್ಟಪ್ಪ ರಾಜ

ಪಂಚನಿಗೆ — ಮೆಟ್ಟಪ್ಪ ರಾಜ

### ಸೋಮವಾರ

ನೀಲಕಕ್ಕೆಬೊಲ್ಕದಿಇದಂ — ಉರಿಂತು ರಾಜ

ಕರುಬೊಳ್ಳೆಗೆ — ಕುಪ್ಲ ರಾಜ

ಕೆಂಪುಪೆರಡಿಗೆ — ಕಡ್ಲೆಗಿಡಿಂತುಪೆರಡಿ ರಾಜ

ಕರುಬೊಳ್ಳೆಗೆ — ಬಿಳಿಗಿಡಿಂತು ರಾಜ

## ಶುಕ್ರವಾರ

ಬಿಳಿಕರುಬೊಳ್ಳಿಗೆ — ಎದೆಕಪ್ಪುಕರುಬೊಳ್ಳಿ ರಾಜ

ಕುಪ್ಲನಿಗೆ — ಕೆಂಪುಬೂದಿಕಾವೆ ರಾಜ

## ಬುಧವಾರ

ಬಿಳಿಗಿಡಿಂತುಗೆ — ಹಳದಿಕುಪ್ಲ ರಾಜ

ಗಿಡಿಂತುಪೆರಡಿಗೆ — ಕೆವೊಕ್ರರಕುಪ್ಲ ರಾಜ

ಕರುಬೊಳ್ಳಿಗೆ — ಕುಪ್ಲ ರಾಜ

ಕರುಬೊಳ್ಳಿಗೆ — ಕೆಂಪ ರಾಜ

## ಶುಕ್ರವಾರ

ಕಪ್ಪುಕುಪ್ಲನಿಗೆ — ಕರುಬೊಳ್ಳಿಪೆರಡಿ ರಾಜ

ಕಪ್ಪುಕುಪ್ಲನಿಗೆ — ಹಳದಿಗಿಡಿಂತು ರಾಜ

ಬೊಳ್ಳಿಗೆ — ಕೆಂಪಕಾವೆ ರಾಜ

ಬಿಳಿಕರುಬೊಳ್ಳಿಗೆ — ಕಪ್ಪುಕೆಂಪುಗಿಡಿಂತು ರಾಜ

ಹಳದಿಗಿಡಿಂತುಗೆ — ಪೆರಡಿಂಗಬೊಳ್ಳಿ ರಾಜ

ಹಳದಿಕಾವೆಗೆ — ಪೆರಡಿಂಗಬೊಳ್ಳಿ ರಾಜ

## ಶುಕ್ಲಪಕ್ಷ

### ಚಾತ್ರಿ — ಶನಿವಾರ

ಪೆರಡಿಂಗಗೆ — ಕರುಬೊಳ್ಳಿ ರಾಜ

### ಶುಕ್ರವಾರ

ಬಿಳೀಬೂದಿಗಿಡಿಂತುಗೆ — ಕೆಂಪುಗಿಡಿಂತು ರಾಜ

ಕರುಬೊಳ್ಳಪೆರಡಿಗೆ — ಕರುಬೊಳ್ಳ ರಾಜ

ಗರುಡಕಾವೆಗೆ — ಕೆಮ್ಮೈರಮೈಪ್ಪ ರಾಜ

ಗಿಡಿಂತುಪೆರಡಿಗೆ — ಕರುಬೊಳ್ಳ ರಾಜ

ಕಪ್ಪುನೀಲಕುಪ್ಪನಿಗೆ — ಕರುಬೊಳ್ಳ ರಾಜ

### ಸೋಮವಾರ

ಮೈಪ್ಪನಿಗೆ — ಪಂಚನಿ ರಾಜ

ಕುಪ್ಪುಉರಿಂತುಗೆ — ಹಂಚನಿ ರಾಜ

ನೀಉರಿಂತುಗೆ — ಬಿಳಿಕರುಬೊಳ್ಳ ರಾಜ

ಕಪ್ಪುಕಡಲೆಗಿಡಿಂತುಗೆ — ಹಳದಿಬೂದಿಕಾವೆ ರಾಜ

### ಶುಕ್ಲಪಕ್ಷ

### ಪಂಚಮಿ — ಆದಿತ್ಯವಾರ

ಉರಿಗೆ — ಮೈಪ್ಪ ರಾಜ

ಬೆಳ್ಳಗೆ — ಪೆರಡಿಮೈಪ್ಪ ರಾಜ

ಕೆಮ್ಮೈರಕುಪ್ಪನಿಗೆ — ಬಿಳಿಗಿಡಿಂತು ರಾಜ

ನೀಲನಿಗೆ — ಬೆಳ್ಳ ರಾಜ

ಕುಪ್ಪುಉರಿಂತುಗೆ — ಉರಿಂತು, ಕೆಂಪ, ರಾಜ

ಪಂಚನಿಗೆ — ಕೆಂಪ ರಾಜ

## ಶುಕ್ರವಾರ

ನೀಲಮ್ಮೆಪ್ಪನಿಗೆ — ನೀಲಕುಪ್ಪ ರಾಜ

ಕೆಮ್ಮ್ರರಕಡಲೆಗಿಡಿಂತುಗೆ — ಹಳದಿಕಾವೆ ರಾಜ

ಹಳದಿಕಾವೆಗೆ — ಕೆಮ್ಮ್ರರಕುಪ್ಪ ರಾಜ

ಹಳದಿಕಾವೆಗೆ — ಕೆಮ್ಮ್ರರಕೆಂಪ ರಾಜ

## ಸೋಮವಾರ

ಕಪ್ಪುಕುಪ್ಪ — ಉರಿಂತು ಕೆಮ್ಮ್ರರ ರಾಜ

ಮ್ಮೆಪ್ಪಕರುಂಬೊಳ್ಳೆಗೆ — ಮಂಜಳಕೆಂಪ ರಾಜ

## ಮಂಗಳವಾರ

ಶಾಸ್ತ್ರಬೊಳ್ಳೆಗೆ — ಪೆರಡಿಂಗ ರಾಜ

ಮಂಜಳನಿಗೆ — ಕುಪ್ಪ ರಾಜ

ಕುಪ್ಪನಿಗೆ — ಕೆಮ್ಮ್ರರ ರಾಜ

ಕುಪ್ಪನಿಗೆ — ಕಜಕ್ಕಪಂಡನಿ ರಾಜ

ಕರುಂಬೊಳ್ಳೆಗೆ — ಮ್ಮೆಪ್ಪಕರುಂಬೊಳ್ಳೆ ರಾಜ

## ಶನಿವಾರ

ಹಳದಿಕೆಮ್ಮ್ರರಗಿಡಿಂತುಗೆ — ಉರಿಂತುಕೆಂಪ ರಾಜ

ಬಿಳಿಗಿಡಿಂತುಗೆ — ಬೂದಿಕೆಮ್ಮ್ರರಗಿಡಿಂತು ರಾಜ

ಕಪ್ಪುಪೆರಡಿಗೆ — ಕರುಂಬೊಳ್ಳೆ ರಾಜ

ಕಕ್ಕೆಗೆ — ಬೂದಿಕಜಕ್ಕಪೆರಡಿ ರಾಜ

ಮುಸಲುಬೂದಿಗೆ — ಕೆಮ್ಮ್ರರ ರಾಜ

ಹಳದಿ ಕೆಮ್ಮಾ್ರರಕರಬೊಳ್ಳೆಗೆ — ನೀಲಕೆಮ್ಮ್ರರಮ್ಮೆಪ್ಪ ರಾಜ

## ಶುಕ್ಲಪಕ್ಷ

### ಷಷ್ಠಿ — ಸೋಮವಾರ

ಕರುಬೊಳ್ಳಗಿಡಿಂತುಗೆ — ನೀಲ ರಾಜ

### ಶುಕ್ರವಾರ

ವೈಪ್ಪನಿಗೆ — ಕೆಂಪ ರಾಜ

ವೈಪ್ಪನಿಗೆ — ಸಾಸ್ತ್ರ ಕೆಂಪುಗಿಡಿಂತು ರಾಜ

ಕರುಬೊಳ್ಳಗೆ — ಕಪ್ಪುಕುಪ್ಲ ರಾಜ

ಬಳಿಕರುಬೊಳ್ಳಗೆ — ಕೆವೈಟ್ರ್ಯರ ರಾಜ

ಹಳದಿ ಕಾವೆಗೆ — ವೈಪ್ಪ ಕರುಬೊಳ್ಳ ರಾಜ

ಕಪ್ಪುಉರಿಂತುಗೆ — ಹಳದಿಕಾವೆ ರಾಜ

ಕಡ್ಲೆಪೆರಡಿಗೆ — ನೀಲ ಉರಿಂತು ರಾಜ

ಕೆವೈಟ್ರ್ಯರ ಉರಿಂತುಗೆ — ಕುಪ್ಲ ರಾಜ

ಮನಲುಬಳಿಬೂದಿಗೆ — ಉರಿಂತುಕೆಂಪ ರಾಜ

ಬೂದಿಗೆಂದಬೆಳ್ಳಗೆ — ಕುಪ್ಲರಾಜ

### ಸೋಮವಾರ

ಪಂಚನಿಗೆ — ಬಳಿಗಿಡಿಂತು ರಾಜ

ಬೊಳ್ಳಗೆ — ಕರುಬೊಳ್ಳ ಕೆವೈಟ್ರ್ಯರ ರಾಜ

ವೈಪ್ಪಕಕ್ಕಗೆ — ಕಪ್ಪುಕೆಂಪುಗಿಡಿಂತು ರಾಜ

ಕರುಬೊಳ್ಳಗೆ — ಉರಿಂತುಕೆವೈಟ್ರ್ಯರ ರಾಜ

ಕೆವೈಟ್ರ್ಯರಗೆ — ವೈಪ್ಪ ಕರುಬೊಳ್ಳ ರಾಜ

## ಶುಕ್ಲಪಕ್ಷ

### ಸಪ್ತಮಿ — ಮಂಗಳವಾರ

ಕೆಮ್ಮೈರಕುಪ್ಪನಿಗೆ — ಹಳದಿಕರುಬೊಳ್ಳ ರಾಜ

ಹಳದಿಕೆಮ್ಮೈರಗೆ — ಕಪ್ಪುಕುಪ್ಪ ರಾಜ

ಕಡಲೆಗಿಡಿಂತುಗೆ — ಪಂಚನಿ ರಾಜ

### ಸೋಮವಾರ

ಕಪ್ಪುಕುಪ್ಪಗೆ — ಕೆಮ್ಮೈರಕುಪ್ಪ ರಾಜ.

ಕೆಮ್ಮೈರಗೆ — ಬಿಳಿಕರುಬೊಳ್ಳ ರಾಜ

ಕಜಕ್ಕನಿಗೆ — ಸಾಸ್ತ್ರಬೊಳ್ಳ ರಾಜ

### ಶುಕ್ರವಾರ

ಮಂಜೊಳಪೆರಡಿಗೆ — ಕರುಬೊಳ್ಳ ರಾಜ

ಕಪ್ಪುಕುಪ್ಪನಿಗೆ — ಕೆಮ್ಮೈರ ರಾಜ

ಮೈಪ್ಪನಿಗೆ — ಕರುಬೊಳ್ಳ ರಾಜ

ಮೈಪ್ಪನಿಗೆ — ಕೆಮ್ಮೈರ ಕರುಬೊಳ್ಳಪೆರಡಿ ರಾಜ

ಕೆಮ್ಮೈರಕುಪ್ಪನಿಗೆ — ಕೆಂಪುಗಿಡಿಂತು ರಾಜ

ಹಳದಿಕಾವೆಗೆ — ಉರಿಂತುಕಾವೆ ರಾಜ

ಬೊಳ್ಳಗೆ — ಕೆಮ್ಮೈರಬೂದಿ ರಾಜ

## ಶುಕ್ಲಪಕ್ಷ

### ಅಷ್ಟಮಿ — ಸೋಮವಾರ

ಹಳದಿ ಗಿಡಿಂತುಗೆ — ಕರುಬೊಳ ಮೈಪ್ಪ ರಾಜ

ಗರುಡಕೆಮ್ಮೈರಗೆ — ಮೈಪ್ಪ ರಾಜ

## ಶುಕ್ರವಾರ

ಕೆವೆಲ್ಯುರ ಗಿಡಿಂತುಗೆ — ಕರುಬೊಳೆ ರಾಜ

ಬೆಳ್ಳಗೆ — ಕಂದುಕೆಂಪುಗಿಡಿಂತು ರಾಜ

ಬೆಳ್ಳಗೆ — ಉರಿಂತು ರಾಜ

ಕರುಬೊಳ್ಳಗಿಡಿಂತುಗೆ — ನಾಸ್ತ್ರಬೊಳೆ ರಾಜ

ಪುಳ್ಳಿಂತುಕರುಬೊಳ್ಳಗೆ — ಗರುಡಕಾವೆ ರಾಜ

## ಸೋಮವಾರ

ಕಪ್ಪುಗಿಡಿಂತುಗೆ — ಬೂದಿಗಿಡಿಂತು ರಾಜ

ವೆಯ್ಯಪ್ಪನಿಗೆ — ಕಪ್ಪುರಿಂತು ರಾಜ

ಹಳದಿಗಿಡಿಂತುಗೆ — ಕರುಬೊಳೆ ರಾಜ

## ಮಂಗಳವಾರ

ಕರುಬೊಳ್ಳಗೆ — ಕಪ್ಪುನೀಲ ರಾಜ

ಹಳದಿಉರಿಂತುಗೆ — ಕುಪ್ಪುರಿಂತು ರಾಜ

## ಶನಿವಾರ

ಕರುಬೊಳ್ಳಗೆ — ವೆಯ್ಯಪ್ಪ ರಾಜ

ಕರುಬೊಳ್ಳಗೆ — ಹಳದಿಕೆವೆಲ್ಯುರ ರಾಜ

ಹಳದಿ ಕಾವೆಗೆ — ಹಳದಿಕೆಂಪ ರಾಜ

## ಸೋಮವಾರ

ಸೀವೆಂಕುಪ್ಪನಿಗೆ — ಬೆಳ್ಳ ರಾಜ

ಪಂಚನಿಗೆ — ಬೆಳ್ಳ ರಾಜ

ಕುಪ್ಪನಿಗೆ — ಕೆವೆಲ್ಯುರ ವೆಯ್ಯಪ್ಪ ರಾಜ

ಕೆಂಪುಕುಪ್ಪನಿಗೆ — ಕೆವೆಲ್ಯುರ ವೆಯ್ಯಪ್ಪ ರಾಜ

ಬುಧವಾರ

ಮೈಪ್ಪನಿಗೆ — ಉರಿಕುಪ್ಲ ರಾಜ

ಕಪ್ಪುಕೆಂಪುಗಿಡಿಂತುಗೆ — ನೀಲಕುಪ್ಲ ರಾಜ

ಹಳದಿಉರಿಂತುಗೆ — ನೀಲಮೈಪ್ಪ ರಾಜ

ಶುಕ್ಲಪಕ್ಷ

ನವಮಿ — ಶುಕ್ರವಾರ

ಹಳದಿಗಿಡಿಂತುಗೆ — ನೀಲಕುಪ್ಲ ರಾಜ

ಹಳದಿಕೆಮ್ಮೈರಗೆ — ಬಿಳಿಗಿಡಿಂತು ರಾಜ

ಕಕ್ಕೆಗೆ — ಹಳದಿಉರಿಂತು ರಾಜ

,ಕೆಮ್ಮೈರಗಿಡಿಂತುಗೆ — ಬಿಳಿಕಡ್ಲೆಗಿಡಿಂತು ರಾಜ

ಕೆಮ್ಮೈರಕುಪ್ಲನಿಗೆ — ಮೈಪ್ಪಪೆರಡಿ ರಾಜ

ಬೆಳ್ಳಗೆ — ಉರಿಂತುಕೆಮ್ಮೈರ ರಾಜ

ಪಂಚನಿಗೆ — ಉರಿಂತು ರಾಜ

ಬೊಳ್ಳಗೆ — ಮೈಪ್ಪರಾಜ

ಬೊಳ್ಳಗೆ — ಉರಿಂತುಕಾವೆ ರಾಜ

ಕಪ್ಪುಉರಿಂತುನಿಗೆ — ಮೈಪ್ಪ ರಾಜ

ಮಂಗಳವಾರ

ಕುರುಡುಮೈಪ್ಪಗೆ — ಹಳದಿಪೆರಡಿಂಗ ರಾಜ

ಕಜಕ್ಕನಿಗೆ — ಕೆಂಪುಪಂಚನಿ ರಾಜ

ಕಪ್ಪುಕುಪ್ಲನಿಗೆ — ಕರುಬೊಳ್ಳ ರಾಜ

ಶುಕ್ರವಾರ

ಕೆಮ್ಮೈರಗೆ — ಬೂದಿಕಾವೆ ರಾಜ

ಕೆಮ್ಮೈರ ಮೈಪ್ಪನಿಗೆ — ಶಾಸ್ತ್ರಕರುಬೊಳ್ಳ ರಾಜ

## ಶನಿವಾರ

ಕಪ್ಪುಉರಿಂತುನಿಗೆ — ಕೆಂಪುಉರಿಂತು ರಾಜ

ಕಡಲೆಬಿಳಿಗಿಡಿಂತುಗೆ — ಬಿಳಿಗಿಡಿಂತು ರಾಜ

## ಸೋಮವಾರ

ಮಂಜೊಳನಿಗೆ — ಕಪ್ಪುನೀಲ ರಾಜ

ಹಳದಿಗಿಡಿಂತುಗೆ — ಮೆೃಪ್ಪ ರಾಜ

## ಶುಕ್ಲಪಕ್ಷ

### ದಶಮಿ — ಶುಕ್ರವಾರ

ಮೆೃಪ್ಪನಿಗೆ — ಉರಿಂತು, ಕೆಂಪ, ರಾಜ

ಕರುಬೊಳ್ಳೆಗೆ — ಹಳದಿ, ಕೆಂಪ, ರಾಜ

ಬಿಳೀಕಡ್ಲೆಗಿಡಿಂತುಗೆ — ಕೆಮೆೃರ ಗಿಡಿಂತು ರಾಜ

ಮಂಜಳನಿಗೆ — ಉರಿಂತು, ಕೆಂಪ, ರಾಜ

ಕಪ್ಪುಕುಪ್ಲಗೆ — ಮೆೃಪ್ಪ ರಾಜ

ಗೆಂದಬೊಳ್ಳೆಬೂದಿಗೆ — ಉರಿಂತು ರಾಜ

ಬಿಳೀಕಾವೆಗೆ — ಮೆೃಪ್ಪ ರಾಜ

ಹಳದಿ ಗಿಡಿಂತುಗೆ — ಉರಿಂತು ರಾಜ

ಕೆಮೆೃರಗೆ — ನೀಲ ರಾಜ

## ಸೋಮವಾರ

ಹಳದಿಕೆಂಪನಿಗೆ — ಕುಪ್ಲ ರಾಜ

ಕರುಬೊಳ್ಳೆಗೆ — ಹಳದಿಕಾವೆ ರಾಜ

ಕುಪ್ಪುಉರಿಂತುಗೆ — ಕರುಬೊಳೀಪೆರಡಿ ರಾಜ

ಕೆಮೆೃರಕುಪ್ಲನಿಗೆ — ಶಾಸ್ತ್ರಬೊಳ್ಳೆ ರಾಜ

ಬೊಳ್ಳೆಗೆ — ಕೆಮೆೃರಬೂದಿ ರಾಜ

ಕೆಂಪುಗಿಡಿಂತುಗೆ — ಕಡಲೆಪೆರಡಿ ರಾಜ

ಉರಿಂತುನಿಗೆ — ಉರಿಂತುಕಾವೆ ರಾಜ

## ಆದಿತ್ಯವಾರ

ಕೆಂಪುಕಾವೆಗೆ — ನೀಲಕುಪ್ಲ ರಾಜ

ಮೈಪ್ಪನಿಗೆ — ಕರುಬೊಳ್ಳ ರಾಜ

## ಸೋಮವಾರ

ಕರುಬೊಳ್ಳಗೆ — ಉರಿಂತುಕೆಂಪ ರಾಜ

## ಶುಕ್ಲಪಕ್ಷ

ಏಕಾದಶಿ — ಸೋಮವಾರ

ಕೆಂಪುಗಿಡಿಂತುಗೆ — ಉರಿಂತು ರಾಜ

ಬೆಳ್ಳಗೆ — ಉರಿಂತು ರಾಜ

ಕುಪ್ಲನಿಗೆ — ಮೈಪ್ಪುಕರುಬೊಳ್ಳ ರಾಜ

ಬೆಳ್ಳಗೆ — ಕೆಂಪುಕಾವೆ ರಾಜ

ಹಳದಿ ಗಿಡಿಂತುಗೆ — ಕರುಬೊಳ್ಳ ರಾಜ

ಮೈಪ್ಪನಿಗೆ — ಕೆಂಪ ರಾಜ

ಬಳಿಬೂದಿಗಿಡಿಂತುಗೆ — ನೀಲಕೆಮ್ಮರ ಕುಪ್ಲ ರಾಜ

## ಶುಕ್ರವಾರ

ಹಳದಿ ಕರುಬೊಳ್ಳಗೆ — ಬಳಿಗಿಡಿಂತು ರಾಜ

ಸಾಸ್ತ್ರಕಪ್ಪುಕುಪ್ಲಗೆ — ಉರಿಂತು ರಾಜ

ಮೈಪ್ಪನಿಗೆ — ಉರಿಂತು ರಾಜ

## ಶುಕ್ಲಪಕ್ಷ

ದ್ವಾದಶಿ — ಶುಕ್ರವಾರ

ಕುಪ್ಲನಿಗೆ — ಕೆಮ್ಮರ ರಾಜ

ಪಂಚನಿಗೆ — ಕಪ್ಪುನೀಲಕುಪ್ಲ ರಾಜ

ಮಂಜೊಳನಿಗೆ — ಬೊಳ್ಳ ರಾಜ

ಕೆಂಪುಬೂದಿಗೆ — ಉರಿಂತುಕುಪ್ಪ ರಾಜ

ಗೆಂದಬೊಳ್ಳಗೆ — ಕಪ್ಪುಕುಪ್ಪ ರಾಜ

ಕಪ್ಪುಕುಪ್ಪನಿಗೆ — ಕೆಂಪುಕೆಮ್ಮೈರ ಗಿಡಿಂತು ರಾಜ

ಕರುಬೊಳ್ಳಗೆ — ಗಿಡಿಂತುಪಂಚನಿ ರಾಜ

ಉರಿಂತು ಪೆರಡಿಗೆ — ನೀಲ ರಾಜ

ಕೆಮ್ಮೈರಗೆ — ಕರುಬೊಳ್ಳ ರಾಜ

ಕುರಡು ಬಿಳಿಕರುಬೊಳ್ಳಗೆ — ಕಪ್ಪುಉರಿಂತು ರಾಜ

ಕರುಬೊಳ್ಳಗೆ — ಶಾಸ್ತ್ರಬೊಳ್ಳ ರಾಜ

ಕಪ್ಪುಕಪ್ಪನಿಗೆ — ಬಿಳಿಬೂದಿಗೆಂದಬೊಳ್ಳ ರಾಜ

ಉರಿಂತುಕುಪ್ಪನಿಗೆ — ಬಿಳಿಗಿಡಿಂತು ರಾಜ

ಕೆಂಪುಕಾವೆಗೆ — ಬಿಳಿಕಾವೆ ರಾಜ

ಹಳದಿಬೂದಿಗೆ — ಪೆರಡಿಂಗ ರಾಜ

## ಶುಕ್ಲಪಕ್ಷ

### ತ್ರಯೋದಶಿ — ಗುರುವಾರ

ಕುಪ್ಪುಉರಿಂತುಗೆ — ಕಪ್ಪುಕೆಂಪುಉರಿಂತು ರಾಜ

ಕುಪ್ಪನಿಗೆ — ಕರುಬೊಳ್ಳ ರಾಜ

ಬೆಳ್ಳಗೆ — ಕಜಕ್ಕಪಂಚನಿ ರಾಜ

ಕೆಮ್ಮೈರ ಮೈಪ್ಪನಿಗೆ — ಕರುಬೊಳ್ಳ ರಾಜ

ಹಳದಿಗೆಂದಬೆಳ್ಳಗೆ — ಬಿಳಿಬೂದಿ ರಾಜ

## ಶುಕ್ಲಪಕ್ಷ

ಚತುರ್ದಶಿ — ಸೋಮವಾರ

ಕೆಮ್ಮೈರಗಿಡಿಂತುಗೆ — ಹಳದಿಕಾವೆ ರಾಜ

ಮೈಪ್ಪನಿಗೆ — ಉರಿಂತು ರಾಜ

ಹುಣ್ಣಮೆ — ಶುಕ್ರವಾರ

ಕೆಂಪುಗಿಡಿಂತುಗೆ — ಮೈಪ್ಪ ರಾಜ

ಕರುಬೊಳ್ಳಗಿಡಿಂತುಗೆ — ಮೈಪ್ಪ ರಾಜ

ಮಂಗಳವಾರ

ಹಳದಿಕೆಮ್ಮೈರಗೆ — ಮೈಪ್ಪಕರುಬೊಳ್ಳ ರಾಜ

ಶುಕ್ರವಾರ

ಹಳದಿಬೂದಿಗೆ — ಕೆಮ್ಮೈರ ರಾಜ

ಹಳದಿಕುಪ್ಲನಿಗೆ — ಕುರುಡುಮೈಪ್ಪ ರಾಜ

ಬೀಬೂದಿಗೆ — ಗಿಡಿಂತುಪೆರಡಿ ರಾಜ

## ಕೃಷ್ಣಪಕ್ಷ

ಪಾಡ್ಯ — ಶುಕ್ರವಾರ

ಬೊಳ್ಳಗೆ — ಸಾಸ್ತ್ರಕೆಮ್ಮೈರಕುಪ್ಲ ರಾಜ

ಮೈಪ್ಪಕರುಬೊಳ್ಳಗೆ — ಉರಿಂತುಕಾವೆ ರಾಜ

ಮೈಪ್ಪಕೆಮ್ಮೈರಗೆ — ಕೆಮ್ಮೈರಕುಪ್ಲ ರಾಜ

ಕರುಬೊಳ್ಳೆಗೆ — ಸಾಸ್ರುಕರುಬೊಳ್ಳೆ ರಾಜ

ಕೆವೆಲ್ತ್ಯರಕಾವೆಗೆ — ವೆಲ್ಯಪ್ಪು ರಾಜ

ಕುಪ್ಲನಿಗೆ — ಕಕ್ಕೆರಾಜ

ರವಿವಾರ

ಕೆಂಪುಗಿಡಿಂತುಗೆ — ಕರುಬೊಳ್ಳೆ ರಾಜ

ಕಕ್ಕೆಗೆ — ಕೆವೆಲ್ತ್ಯರಕುಪ್ಲ ರಾಜ

ಕೆಂಪುಗಿಡಿಂತುಗೆ — ವೆಲ್ಯಪ್ಪು ರಾಜ .

ಕೃಷ್ಣಪಕ್ಷ

ಬಿದಿಗೆ — ಶುಕ್ರವಾರ

ಕಪ್ಪುಕುಪ್ಲನಿಗೆ — ಬಿಳಿಕರುಬೊಳ್ಳೆ ರಾಜ

ಉರಿಂತುಬೂದಿಗೆ — ಹಳದಿ, ಗಿಡಿಂತು, ರಾಜ

ಸಾಸ್ರುಕರುಬೊಳ್ಳೆಗೆ — ಹಳದಿಕಾವೆ ರಾಜ

ಗುರುವಾರ

ಬೆಳ್ಳೆಗೆ — ನೀಲ, ಪಂಚನಿ, ಉರಿಂತು, ರಾಜ

ಹಳದಿಬೂದಿಗೆ — ಕೆವೆಲ್ತ್ಯರಕೆಂಪ ರಾಜ

ಬೆಳ್ಳೆಗೆ — ಕೆವೆಲ್ತ್ಯರಗಿಡಿಂತು ರಾಜ

ಬೂದಿಗೆ — ಬೂದಿಗಿಡಿಂತು ರಾಜ

ಶುಕ್ರವಾರ

ಕಪ್ಪುಕುಪ್ಲನಿಗೆ — ಹಳದಿಕೆವೆಲ್ತ್ಯರ ರಾಜ

ಕೆವೆಲ್ತ್ಯರಪೆರಡಿಗೆ — ಹಳದಿಕರುಬೊಳ್ಳೆ ರಾಜ

ಕಪ್ಪುನೀಲನಿಗೆ — ಕೆವೆಲ್ತ್ಯರಗಿಡಿಂತು ರಾಜ

## ಸೋಮವಾರ

ಕಪ್ಪುಉರಿಂತುಗೆ — ಕೆಂಪುಉರಿಂತು ರಾಜ

ಕರುಬೊಳ್ಳೆಗೆ — ಉರಿಂತುಕೆಂಪ ರಾಜ

## ಆದಿತ್ಯವಾರ

ಕಪ್ಪುಕಡಲೆಗಿಡಿಂತುಗೆ — ಉರಿಂತುಕೆಂಪ ರಾಜ

ಕೆಮ್ಮೈರಪೆರಡಿಗೆ — ಉರಿಂತುಕೆಂಪ ರಾಜ

## ಕೃಷ್ಣಪಕ್ಷ

### ತದಿಗೆ — ಶುಕ್ರವಾರ

ಕರುಬೊಳ್ಳೆಕೆಮ್ಮೈರಗೆ — ಹಳದಿಕಾವೆ ರಾಜ

ಕೆಮ್ಮೈರಗೆ — ನೀಲಕುಪ್ಲ ರಾಜ

ಕುಪ್ಲುಕೆಮ್ಮೈರಗೆ — ನೀಲಕುಪ್ಲ ರಾಜ

ಬಿಳಿಮೈಪ್ಪನಿಗೆ — ಕೆಮ್ಮೈರ ಮೈಪ್ಪ ರಾಜ

ಬಿಳಿಗಿಡಿಂತುಗೆ — ಪಂಚನಿ ರಾಜ

ಬಿಳಿಕರುಬೊಳ್ಳೆಗೆ — ಸಾಸ್ತ್ರಬೊಳೆ ರಾಜ

## ಕೃಷ್ಣಪಕ್ಷ

### ಚೌತಿ — ಶುಕ್ರವಾರ

ಮೈಪ್ಪನಿಗೆ — ಕಪ್ಪುಉರಿಂತು ರಾಜ

ಉರಿಂತುನಿಗೆ — ಕೆಮ್ಮೈರಪೆರಂಗ ರಾಜ

ಕರುಬೊಳ್ಳೆಗೆ — ಹಳದಿಕೆಮ್ಮೈರ ರಾಜ

ಕರುಬೊಳ್ಳೆಗೆ — ನೀಲಕುಪ್ಲ ರಾಜ

ಕೆಂಪುಪೆರಡಿಗೆ — ಸಾಸ್ತ್ರಕಪ್ಪುಕುಪ್ಲ ರಾಜ

ನೀಲಮೈಪ್ಪನಿಗೆ — ಕೆಂಪುಗಿಡಿಂತು ರಾಜ

ಆದಿತ್ಯವಾರ

ಕರುಬೊಳ್ಳಗೆ — ಸಾಸ್ರುಕಕ್ಕ ರಾಜ

ಕೆಮ್ಮೈರಮೈಪ್ಪನಿಗೆ — ಬಿಳಿಬೂದಿ ರಾಜ

ಕೃಷ್ಣಪಕ್ಷ

ಪಂಚಮಿ — ಆದಿತ್ಯವಾರ

ಕರುಬೊಳ್ಳಮೈಪ್ಪನಿಗೆ — ಬೊಳ್ಳ ರಾಜ

ಶುಕ್ರವಾರ

ಕೆಂಪುಗಿಡಿಂತುಗೆ. — ಸಾಸ್ರುಬೊಳ್ಳ ರಾಜ

ಕೃಷ್ಣಪಕ್ಷ

ಷಷ್ಠಿ — ಶುಕ್ರವಾರ

ಉರಿಂತುನಿಗೆ — ಪಂಚನಿಗೆಂದಬೊಳ್ಳ ರಾಜ

ಹಳದಿಗಿಡಿಂತುಗೆ — ಕೆಂಪ ರಾಜ

ಕುಪ್ಲನಿಗೆ — ಕೆಂಪುಕಾವೆ ರಾಜ

ಕಜಕ್ಕನಿಗೆ — ಬಿಳೀಗಿಡಿಂತು ರಾಜ

ಬಿಳಿಕಪ್ಪುಗಿಡಿಂತುಗೆ — ಕೆಮ್ಮೈರಗಿಡಿಂತು ರಾಜ

ಹಳದಿಗಿಡಿಂತುಗೆ — ಕಜಕ್ಕಪಂಚನಿ ರಾಜ

ಬೊಳ್ಳಗೆ — ಉರಿಂತು ರಾಜ

ಹಳದಿಕಾವೆಗೆ — ನೀಲ ರಾಜ

ಕರುಬೊಳ್ಳಪೆರಡಿಗೆ — ಬೊಳ್ಳ ರಾಜ

ಕೆಮ್ಮೈರಉರಿಂತುಗೆ — ಬೊಳ್ಳ ರಾಜ

ಮೈಪ್ಪನಿಗೆ — ಬೊಳ್ಳ ರಾಜ

ಬೊಳ್ಳಗೆ — ಕೆಮ್ಮೈರಗಿಡಿಂತುಕಾವೆ ರಾಜ

## ಸೋಮವಾರ

ಪುಳ್ಳಿಂತುಬಿಳಿಕರುಬೊಳ್ಳಿಗೆ — ಹಳದಿಕರುಬೊಳ್ಳ ರಾಜ

ಪಂಚನಿಗೆ — ಕೆಮ್ಮೃರಉರಿಂತುಕುಪ್ಲ ರಾಜ

ಕೆಮ್ಮೃರಕಾವೆಗೆ — ಉರಿಂತು ಕುಪ್ಲ ರಾಜ

ಕಜಕೃಪೆರಡಿಗೆ — ಮೃಪ್ಪು ರಾಜ

## ಶನಿವಾರ

ಕಪ್ಪುಕುಪ್ಲನಿಗೆ — ಎದೆಬಿಳಿಮೃಪ್ಪು ರಾಜ

ಕೆಂಪುಕುಪ್ಲನಿಗೆ — ಉರಿಂತುಕೆಂಪ ರಾಜ

ಕೆಂಪುಕುಪ್ಲನಿಗೆ — ನೀಲಕುಪ್ಲ ರಾಜ

## ಕೃಷ್ಣಪಕ್ಷ

### ಸಪ್ತಮಿ — ಬುಧವಾರ

ಕಪ್ಪುಉರಿಂತುಗೆ — ಮುಂಗಿಲ್ಕಡ್ಲಗಿಡಿಂತು ರಾಜ

ಬಿಳಿಕಡ್ಲಗಿಡಿಂತುಗೆ — ಬಿಳಿಕರುಬೊಳ್ಳ ರಾಜ

ಉರಿಂತುನಿಗೆ — ಕೆಮ್ಮೃರಉರಿಂತು ರಾಜ

ಕೆಮ್ಮೃರಮೃಪ್ಪುನಿಗೆ — ಬಿಳಿಕೆಮ್ಮೃರಬೂದಿ ರಾಜ

ಬೆಳ್ಳಿಗೆ — ಕರುಬೊಳ್ಳ ರಾಜ

## ಶುಕ್ರವಾರ

ಕರುಬೊಳ್ಳಿಗೆ — ಕೆಮ್ಮೃರಮೃಪ್ಪು ರಾಜ

ಕಪ್ಪುಕುಪ್ಲಗೆ — ಕೆಂಪುಕಾವೆ ರಾಜ

ಕರುಬೊಳ್ಳಿಗೆ — ಕೆಂಪ ರಾಜ

ಮೃಪ್ಪುನಿಗೆ — ಬಿಳಿಬೂದಿ ರಾಜ

## ಶನಿವಾರ

ಕೆಂಪುಕಾವೆಗೆ — ಉರಿಂತುಕುಪ್ಲ ರಾಜ

ಕುಪ್ಲನಿಗೆ — ಹಳದಿಕೆಮ್ಮೆರ ರಾಜ

ಮುಂಜೊಳಕೆಂಪನಿಗೆ — ಕಡಲೆಗಿಡಿಂತು ರಾಜ

ಪಂಚನಿಗೆ — ಶಾಸ್ತ್ರಬೊಳ್ಳೆ ರಾಜ

ಕುಪ್ಲನಿಗೆ — ಬಿಳೀಗಿಡಿಂತು ರಾಜ

## ಮಂಗಳವಾರ

ಕೆಂಪುಕುಪ್ಲನಿಗೆ — ಕೆಮ್ಮೆರಮ್ಮೆಪ್ಪ ರಾಜ

ಹಳದಿಗಿಡಿಂತುಗೆ — ಕೆಮ್ಮೆರ ರಾಜ

ಪೆರಡಿಂಗಗೆ — ಕುಪ್ಲ ರಾಜ

## ಶನಿವಾರ

ಕೆಂಪುಕಾವೆಗೆ — ಉರಿಂತುಕುಪ್ಲ ರಾಜ

ಕುಪ್ಲನಿಗೆ — ಉರಿಂತುಕುಪ್ಲ ರಾಜ

ಮುಂಜೋಳಕೆಂಪನಿಗೆ — ಕಡಲೆಗಿಡಿಂತು ರಾಜ

ಪಂಚನಿಗೆ — ಸಾಸ್ತ್ರಬೊಳ್ಳೆ ರಾಜ

ಕುಪ್ಲನಿಗೆ — ಬಿಳೀಗಿಡಿಂತು ರಾಜ

## ಶುಕ್ರವಾರ

ಹಳದಿಗಿಡಿಂತುಗೆ — ಉರಿಂತುಕೆಂಪ ರಾಜ

ಕೆಂಪುಗಿಡಿಂತುಗೆ — ಕರುಬೊಳ್ಳೆ ರಾಜ

ಹಳದಿಗಿಡಿಂತುಗೆ — ಮುಂಜಳಕೆಂಪ ರಾಜ

ಹಳದಿಕೆಮ್ಮೆರಗೆ — ಮುಂಜಳಕೆಂಪ ರಾಜ

## ಕೃಷ್ಣಪಕ್ಷ

### ಅಷ್ಟಮಿ — ಶನಿವಾರ

ಸಾಸ್ರುಮೈಪ್ಪುಗೆ — ಕರುಬೊಳ್ಳ ರಾಜ

ಮೈಪ್ಪುಕೆಮ್ಮೈರಗೆ — ಮಂಜಳಕೆಂಪ ರಾಜ

### ಸೋಮವಾರ

ಪಳದಿಕಾವೆಗೆ — ಕೆಮ್ಮೈರಪೆರಡಿ ರಾಜ

ಉರಿಂತುಪೆರಡಿಗೆ — ಉರಿಂತುಕೆಂಪ ರಾಜ

ಹಳದಿಕೆಮ್ಮೈರಗೆ — ಬೂದಿಬೊಳ್ಳ ರಾಜ

ಕೆಮ್ಮೈರಕುಪ್ಲಗೆ — ಸಾಸ್ರುಕರುಬೊಳ್ಳ ರಾಜ

ಕೆಮ್ಮೈರಕುಪ್ಲಗೆ — ಕೆಮ್ಮೈರ ರಾಜ

### ಶುಕ್ರವಾರ

ಮೈಪ್ಪುನಿಗೆ — ಕೆಂಪ ರಾಜ

ಬೆಳ್ಳಗೆ — ಕೆಮ್ಮೈರಕುಪ್ಲ ರಾಜ

### ಸೋಮವಾರ

ಕಪ್ಪುಕೆಮ್ಮೈರಕುಪ್ಲಗೆ — ಕೆಂಪುಕುಪ್ಲ ರಾಜ

ಹಳದಿಕೆಮ್ಮೈರಕುಪ್ಲಗೆ — ನೀಲ, ಕೆಂಪುಕುಪ್ಲ ರಾಜ

ಮಂಜಳಕೆಂಪನಿಗೆ — ನೀಲಕೆಮ್ಮೈರಕುಪ್ಲ ರಾಜ

### ಶುಕ್ರವಾರ

ಕಡಲೆಕೆಮ್ಮೈರಗಿಡಿಂತುಗೆ — ಕೆಮ್ಮೈರಕರುಬೊಳ್ಳ ರಾಜ

ಹಳದಿಪೆರಡಿಗೆ — ಕೆಂಪುಕಾವೆ ರಾಜ

## ಕೃಷ್ಣಪಕ್ಷ

### ನವಮಿ — ಶುಕ್ರವಾರ

ನೀಲನಿಗೆ — ಬಿಳಿಮೈಪ್ಪ ರಾಜ

ಕೆಮ್ಮೈರನಿಗೆ — ಕೆಮ್ಮೈರಬೂದಿ ರಾಜ

ಕೆಮ್ಮೈರಗಿಡಿಂತುಗೆ — ಬಿಳೀಕಡ್ಲೆಗಿಡಿಂತು ರಾಜ

ಕೆಮ್ಮೈರಕುಪ್ಲನಿಗೆ — ಮೈಪ್ಪಪೆರಡಿ ರಾಜ

ಬೆಳ್ಳೆಗೆ — ಉರಿಂತುಕೆಮ್ಮೈರ ರಾಜ

## ಕೃಷ್ಣಪಕ್ಷ

### ದಶಮಿ — ಶುಕ್ರವಾರ

ಕೆಮ್ಮೈರಗೆ — ಕೆಂಪ ರಾಜ

### ಮಂಗಳವಾರ

ಕಪ್ಪುಕುಪ್ಲನಿಗೆ — ಕೆಮ್ಮಾರ ರಾಜ

ಕಜಕ್ಕಪೆರಡಿಗೆ — ಕೆಂಪುಮಂಜಳಕೆಮ್ಮೈರ ರಾಜ

### ಶುಕ್ರವಾರ

ಮೈಪ್ಪನಿಗೆ — ಉರಿಂತುಕಾವೆ ರಾಜ

ಉರಿಂತುಕುಪ್ಲನಿಗೆ — ಕೆಮ್ಮೈರಗಿಡಿಂತು ರಾಜ

ಕುಪ್ಲನಿಗೆ — ಬೆಳ್ಳೆ ರಾಜ

ಉರಿಂತುಕುಪ್ಲನಿಗೆ — ಕರುಬೊಳ್ಳೆ ರಾಜ

ಮೈಪ್ಪನಿಗೆ — ಕೆಮ್ಮೈರಗಿಡಿಂತು ರಾಜ

ಶನಿವಾರ

ಹಳದಿಗಿಡಿಂತುಗೆ — ಕೆಂಪುಪಂಚನಿ ರಾಜ

ಪಂಚನಿಗೆ — ಕರುಬೊಳ್ಳ ರಾಜ

ಹಳದಿಗಿಡಿಂತುಗೆ — ಕೆಂಪ ರಾಜ

ಸೋಮವಾರ

ಹಳದಿಕೆಂಪನಿಗೆ — ಕರುಬೊಳ್ಳ ರಾಜ

ಕಡಲೆಗಿಡಿಂತುಗೆ — ಕರುಬೊಳ್ಳ ರಾಜ.

ಹಳದಿಕೆಂಪನಿಗೆ — ಮೈಪ್ಪುಕೆಮೈರ ರಾಜ

ಬಿಳಿಗಿಡಿಂತುಗೆ — ನೀಲಕುಪ್ಪ ರಾಜ

ಕೃಷ್ಣಪಕ್ಷ

ಏಕಾದಶಿ — ಶುಕ್ರವಾರ

ಕಕ್ಕೆಗೆ — ಕೆಂಪ ರಾಜ

ಕಡಲೆಬಿಳಿಗಿಡಿಂತುಗೆ — ಬೊಳ್ಳ ರಾಜ

ಶನಿವಾರ

ಬೊಳ್ಳೆಗೆ — ಸಾಸ್ತ್ರುಕೆಮೈರಮೈಪ್ಪ ರಾಜ

ಕುರುಡುನೀಲಮೈಪ್ಪನಿಗೆ — ಸಾಸ್ತ್ರುಕೆಮೈರಗಿಡಿಂತು ರಾಜ

ಸೋಮವಾರ

ಕಪ್ಪುಉರಿಂತುಗೆ — ಕೆಂಪ ರಾಜ

ಕೆಂಪುಕಪ್ಪುಕಾವೆಗೆ — ಉರಿಂತು ರಾಜ

ಕರುಬೊಳ್ಳೆಗೆ — ಬಿಳಿಕಾವೆ ರಾಜ

ಕಪ್ಪುಕುಪ್ಲನಿಗೆ — ಬೆಳ್ಳಿ ರಾಜ

ಕಪ್ಪುಉರಿಂತುಗೆ — ಗೆಂದಬೊಳ್ಳಿ ರಾಜ

ವುಂಜಳಕೆಂಪನಿಗೆ — ಕಜಕ್ಕಬೊಳ್ಳಿ ರಾಜ

ಕಪ್ಪುನೀಲಕುಪ್ಲನಿಗೆ — ಹಳದಿಕೆಂಪ ರಾಜ

ಕೃಷ್ಣಪಕ್ಷ

ದ್ವಾದಶಿ — ಶನಿವಾರ

ಉರಿಂತುನಿಗೆ — ವೆಳ್ಳಪ್ಪುಕರುಬೊಳ್ಳಿ ರಾಜ

ಕೆಂಪುಗಿಡಿಂತುಗೆ — ಬಳೀಗಿಡಿಂತು ರಾಜ

ಕಪ್ಪುಉರಿಂತುಗೆ — ಕೆಂಪಉರಿಂತು ರಾಜ

ಶುಕ್ರವಾರ

ಬಳಿವೆಳ್ಳಪ್ಪನಿಗೆ — ಕವೆಳ್ಳರಕೆಂಪ ರಾಜ

ಕಪ್ಪುಕುಪ್ಲನಿಗೆ — ಬೊಳ್ಳಿ ರಾಜ

ಕಪ್ಪುಕುಪ್ಲನಿಗೆ — ಕವೆಳ್ಳರಕುಪ್ಲ ರಾಜ

ಹಳದಿಕವೆಳ್ಳರಗೆ — ನೀಲವೆಳ್ಳಪ್ಪು ರಾಜ

ಆದಿತ್ಯವಾರ

ಕೆಂಪುಪೆರಡಿಗೆ — ಕರುಬೊಳೆ ರಾಜ

ಗೆಂದಬೊಳ್ಳಿಗೆ — ಕಪ್ಪುಕುಪ್ಲ ರಾಜ

ಗೆಂದಬೊಳ್ಳಿಗೆ — ಉರಿಂತುಕವೆಳ್ಳರ ರಾಜ

ವುಂಜಳನಿಗೆ — ಕರುಬೊಳ್ಳಿಪೆರಡಿ ರಾಜ

ಕಪ್ಪುಗಿಡಿಂತುಗೆ — ಕವೆಳ್ಳರಕರುಬೊಳ್ಳಿ ರಾಜ

ಕಪ್ಪುಕುಪ್ಲನಿಗೆ — ವುಂಜಳಕೆಂಪ ರಾಜ

ಕಪ್ಪುಕರುಬೊಳ್ಳಿಗೆ — ಬೆಳ್ಳಿ ರಾಜ

ಸೋಮವಾರ

ಕಪ್ಪುಉರಿಯಗೆ — ಉರಿಯಕೆಂಪ ರಾಜ

ಹಳದಿಕರುಬೊಳ್ಳಗೆ — ಬಿಳಿಕೆಮ್ಮುರಗಿಡಿಯ ರಾಜ

ಕೃಷ್ಣಪಕ್ಷ

ತ್ರಯೋದಶಿ — ಶುಕ್ರವಾರ

ಮಂಜೊಳನಿಗೆ — ಕುಪ್ಲ ರಾಜ

ಉರಿಯಕುಪ್ಲನಿಗೆ — ಕಜಕ್ಕಪಂಚನಿ ರಾಜ

ಕರುಬೊಳ್ಳಪೆರಡಿಗೆ — ಕೆಮ್ಮುರಗಿಡಿಯ ರಾಜ

,ಕಡಲೆಪೆರಡಿಂಗಗಿಡಿಯಗೆ — ಕರುಬೊಳ್ಳ ರಾಜ

ಆದಿತ್ಯವಾರ

ಕೆಂಪುಉರಿಯನಿಗೆ — ಕರುಬೊಳ್ಳ ರಾಜ

ಕೆಂಪುಕಾವೆಗೆ — ಗೆಂದಬೊಳ್ಳ ರಾಜ

ಮೆಯ್ಯಪ್ಪನಿಗೆ — ಕೆಂಪುಗಿಡಿಯ ರಾಜ

ಶುಕ್ರವಾರ

ಕಪ್ಪುಗಿಡಿಯಗೆ — ಬೂದಿಕಾವೆ ರಾಜ

ಮೆಯ್ಯಪ್ಪನಿಗೆ — ಉರಿಯಕುಪ್ಲ ರಾಜ

ಕುಪ್ಲನಿಗೆ — ಬಿಳಿಬೂದಿಕಾವೆ ರಾಜ

ಕಪ್ಪುನೀಲನಿಗೆ — ಹಳದಿಕೆಂಪ ರಾಜ

## ಕೃಷ್ಣಪಕ್ಷ

### ಅಮಾವಾಸ್ಯೆ — ಶುಕ್ರವಾರ

ಗೆಂಡಬೊಳ್ಳೆಗೆ — ಮುಸಲುಕೆಮ್ಮೈರಗಿಡಿಂತು ರಾಜ

ಕೆಮ್ಮೈರನಿಗೆ — ನೀಲಊರಿಂತು ರಾಜ

ಕಪ್ಪುಗಿಡಿಂತುನಿಗೆ — ಕೆಮ್ಮೈರ ರಾಜ

ಕಪ್ಪುಕುಪ್ಲನಿಗೆ — ಕೆಮ್ಮೈರಕಾವೆ ರಾಜ

ಮೈಪ್ಪನಿಗೆ — ಕೆಂಪ ರಾಜ

ಕಪ್ಪುಕುಪ್ಲಗೆ — ಕರುಬೊಳ್ಳೆಪೆರಡಿಂಗ ರಾಜ

ಕೆಮ್ಮೈರಕುಪ್ಲಗೆ — ಕೆಮ್ಮೈರಗಿಡಿಂತು ರಾಜ

ಬೊಳ್ಳೆಗೆ — ಬೂದಿಕೆಮ್ಮೈರ ರಾಜ

### ಮಂಗಳವಾರ

ಹಳದಿಊರಿಂತುಗೆ — ಮೈಪ್ಪ ರಾಜ

ಕೆಂಪುಕುಪ್ಲನಿಗೆ — ಪಂಚನಿ ರಾಜ

### ಶುಕ್ರವಾರ

ಮೈಪ್ಪನಿಗೆ — ಬಿಳಿಕರುಬೊಳ್ಳೆ ರಾಜ

ಮೈಪ್ಪನಿಗೆ — ಊರಿಂತುಕೆಂಪ ರಾಜ

ಕುಪ್ಲನಿಗೆ — ಕೆಮ್ಮೈರ ರಾಜ

### ಸೋಮವಾರ

ಕರುಬೊಳ್ಳೆಗೆ — ನೀಲಕುಪ್ಲ ರಾಜ

ಬೊಳ್ಳೆಗೆ — ಪಂಚನಿ ರಾಜ

ಕರುಬೊಳ್ಳೆಗೆ — ಸಾಸ್ತ್ರಕುಪ್ಲ ರಾಜ

1.3: ಕೋಳಿಅಂಕದ ಆಮಂತ್ರಣ ಪತ್ರಿಕೆ.

ಕುಕ್ಕುಟ ಕದನದ ಅಕ್ಕರೆಯ ಕರೆಯೋಲೆ

ಬನ್ನಿರಿ! ಕಟ್ಟಿರಿ! ಗೆಲ್ಲಿರಿ!



ಇದೇ ಬರುವ ದಿನಾಂಕ

ಶರಾಬು ಅಂಗಡಿ ಬಳಿಯಲ್ಲಿ

ಪ್ರಚಂಡ

ಕೋಳಿ ಅಂಕ

ವೆಂದು ನಿಶ್ಚಯಿಸಿರುತ್ತೇವೆ

ತಮ್ಮ ತಮ್ಮ ಅಂಕದ ಕೋಳಿಗಳನ್ನು ತಂದು ಪ್ರೋತ್ಸಾಹಿಸಬೇಕಾಗಿ ವಿನಂತಿ.

ವ್ಯವಸ್ಥಾಪಕರು.

ಬಹುಮಾನಗಳ ವಿವರ:

## 2. ನಿರೂಪಕರ ಪಟ್ಟಿ:

1. ಐತ್ತು ಅಜಿಲ (60), ಕಾಫಿ ಜಾಲು, ಕುದ್ಮಾರು ಅಂಚೆ ಮತ್ತು ಗ್ರಾಮ, ಪುತ್ತೂರು ತಾಲೂಕು – 574 202

2. ಕುಶಾಲಪ್ಪ ಗೌಡ (45), ಕಳುವಾಜೆ ಮನೆ, ಕ್ಯಾಮಣ ಅಂಚೆ, ಪುತ್ತೂರು ತಾಲೂಕು, ದ.ಕ. – 574 202.

3. ಕೋಡಣ್ಣ ರೈ ಅನಾಜೆ (71), ಸಂಜಕಾಡು ಮನೆ, ಈಶ್ವರ ಮಂಗಲ ಅಂಚೆ ಪುತ್ತೂರು ತಾಲೂಕು – 574 313.

4. ಗಣೇಶ ಶೆಟ್ಟಿ (26), ರವಿ ನಿಲಯ, ಅಡಿಗದೆಂ, ಅಂಚೆ: ಕಿದೂರು, ಕುಂಬಳೆ – 670 321.

5. ಗಣೇಶ ರೈ (29), ಸರಸ್ವತಿ ನಿಲಯ, ಸವಣಾಲು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು.

6. ಜನಾರ್ಧನ ಮೆಕ್ಯಾನಿಕ್ (39), ಮುರಮನೆ, ಕಬಕ ಗ್ರಾಮ ಮತ್ತು ಅಂಚೆ, ಪುತ್ತೂರು ತಾಲೂಕು.

7. ದೇರಣ್ಣ ರೈ ಅನಾಜೆ (70), ಅರಂತನಡ್ಕ ಮನೆ, ಬೆಟ್ಟಂಪಾಡಿ ಗ್ರಾಮ ಮತ್ತು ಅಂಚೆ, ಪುತ್ತೂರು ತಾಲೂಕು, ದ.ಕ.

8. ನರಸಿಂಹ ದೇವಾಡಿಗ (66), ತೆಕ್ಕಟ್ಟೆ ಅಂಚೆ, ಕುಂದಾಪುರ ತಾಲೂಕು, ದ.ಕ. – 576 231.

9. ನಾರಾಯಣ ಗೌಡ (80), ಕಟ್ಟೆಮನೆ, ಉಜಿರ್ ಪಾದೆ ಅಂಚೆ, ಬಲ್ನಾಡು ಗ್ರಾಮ, ಪುತ್ತೂರು ತಾಲೂಕು, ದ.ಕ. – 574 203.

10. ನಾರಾಯಣ ಶೆಟ್ಟಿ (80), ತಾಳಿಗುಡ್ಡೆ ಮನೆ, ಅಂಚೆ: ಬಂಬ್ರಾಣ, ಕುಂಬಳೆ (ದಾರಿ), ಕಾಸರಗೋಡು, ಕೇರಳ – 670 321.

11. ಬಟ್ಯಪ್ಪ ಪೂಜಾರಿ (44), ಕುಕ್ಕುತಡಿ ಮನೆ, ಬಲ್ನಾಡು ಗ್ರಾಮ, ಉಜಿರೆಪಾದೆ ಅಂಚೆ, ಪುತ್ತೂರು – 574 203.

12. ಬಾಬು ಗೌಡ (50), ಕಟ್ಟೆಮನೆ, ಉಜಿರಪಾದೆ ಅಂಚೆ, ಪುತ್ತೂರು ತಾಲೂಕು, ದ.ಕ. — 574 203.

13. ಬಾಲಕೃಷ್ಣ ಆಳ್ವ (39), ಆಳ್ವ ಫಾರ್ಮ್ಸ್, ಅಂಚೆ ಸೋಣಗೇರಿ, ಸುಳ್ಯ.

14. ಬೆಳಿಯಪ್ಪ ಗೌಡ (80), ಕಾಂತಿಲ ಮನೆ, ಬಲ್ನಾಡು ಗ್ರಾಮ, ಉಜಿರಪಾದೆ ಅಂಚೆ, ಪುತ್ತೂರು, ದ.ಕ.

15. ಬೆಳಿಯಪ್ಪ ಗೌಡ (56), ಜತ್ತಿಬೆಟ್ಟು ಮನೆ, ಬೆಳ್ಳಿಪಾಡಿ ಗ್ರಾಮ, ಕೋಡಿಬಾಡಿ ಅಂಚೆ, ಪುತ್ತೂರು ತಾಲೂಕು, ದ.ಕ.

16. ಬೇಡು ಕಾಪಾಡ (48), ಶೇಣಿ ಕಾಮತ ಮುಗಾಲೆ, ಮೈರೆ ಅಂಚೆ, ಕಾನರಗೋಡು — 671 552.

17. ಮಹಾಬಲ ಶೆಟ್ಟಿ (38), ದೇವಶ್ಯಮನೆ ಬಾರೆಬೆಟ್ಟು ಅಂಚೆ, ಬಂಟ್ವಾಳ ತಾಲೂಕು ದ.ಕ.

18. ಮೂರಪ್ಪ ಶೆಟ್ಟಿ (52), ಬೈಲುಗುತ್ತು ಮನೆ, ಪುಣಚಗ್ರಾಮ ಮತ್ತು ಅಂಚೆ, ಬಂಟ್ವಾಳ ತಾಲೂಕು.

19. ಮೋಹನದಾಸ ಶೆಟ್ಟಿ (30), ಮಜಾಜ್ಜರು ಮನೆ, ಬೇಕೂರು ಅಂಚೆ, (ದಾರಿ) ಉಪ್ಪಳ, ಕೇರಳ.

20. ರತ್ನಾಕರ ರೈ (40), ಎಡಮುಂದೇರು ಮನೆ, ನೆಟ್ಟಣಿಗೆ ಅಂಚೆ, (ದಾರಿ) ಮುಳ್ಳೇರಿಯ, ಕಾಸರಗೋಡು — 671 543.

21. ರಾಮಚಂದ್ರ, (46), ಕಾಲೇಜು ಕ್ಯಾಂಟಿನ್, ಕುರುಂಜಿ ಬಾಗ್, ಸುಳ್ಯ — 574 239.

22. ರಾಮಣ್ಣ ರೈ ಎಂ. (69), ಮುಂದೆಲಕಾಡಿ, ಮದಕ್ಕ, ಬೆಟ್ಟಂಪಾಡಿ ಗ್ರಾಮ, ಇರ್ದೆ ಅಂಚೆ, ಪುತ್ತೂರು ತಾಲೂಕು — 574 259.

23. ಲಕ್ಷ್ಮಣ ರೈ.ಪಿ. (42), ಪುತ್ರಳ ಮನೆ, ಅಂಚೆ: ಏತಡ್ಕ, ಕಾಸರಗೋಡು ತಾಲೂಕು, ಕೇರಳ.

24. ವಿಶ್ವನಾಥ ಆಳ್ವ (70), ಕೇಪು ಮನೆ, ನೀರ್ಕಾಜೆ ಅಂಚೆ, (ದಾರಿ) ಎಸ್.ಎಸ್. ವಿಹಾರ್, ಬಂಟ್ವಾಳ ತಾಲೂಕು — 574 235.

25. ಶಿವ ರೈ.ಎ. (50), ಎಮಂಜೆ ಮನೆ, ಉಳ್ಳೋಡಿ ಅಂಚೆ, (ದಾರಿ) ಕುಂಬಳೆ, ಕಾಸರಗೋಡು – 671 321.

26. ಸಂಜೀವ ಸಸ್ರಿಸ (35), ಪೆರ್ಮಾಣು ಅಂಚೆ, ನಡಗ್ರಾಮ, ಬೆಳ್ತಂಗಡಿ ತಾಲೂಕು – 574 214.

27. ಸೀತಾರಾಮ ಶೆಟ್ಟಿ (52), ಬೋಳ್ಯಾರು ಮನೆ, ಬೋಳ್ಯಾರು ಅಂಚೆ, ಮಂಗಳೂರು ತಾಲೂಕು, ದ.ಕ.

28. ದಿವಾಕರ ರೈ (30), ಅಂಚೆ: ಸೋಣಂಗೇರಿ, ಸುಳ್ಯ.

## 3. ಪರಾಮರ್ಶನ ಗ್ರಂಥಗಳು :


1. ಅಭಂತರ್ ಕಾರ್ಕಾಡಿ, 1989. 'ತುಳುನಾಡಿದ ಕಂಬುಳ ಬೊಕ್ಕ ಕೋರಿದ ಕಟ್ಟ', (ಪನಿಯೂರ (ಸಂ) ಚಿನ್ನಪ್ಪ ಗೌಡ ಕೆ.) ಮಂಗಳೂರು : ತುಳುಕೂಟ (ರಿ).

2. ಕುವೆಂಪು; 1936. ಕಾನೂರು ಹೆಗ್ಗಡತಿ, ಮೈಸೂರು : ಉದಯರವಿ ಪ್ರಕಾಶನ.

3. ಕೃಷ್ಣಯ್ಯ ಎಸ್.ಎ., 1993. 'ಕೋಣಗಳ ಸಾಮಾಜಿಕ ನೆಲೆ ಮತ್ತು ಸಾಂಸ್ಕೃತಿಕ ಸಂಬಂಧಗಳು', (ಅಪ್ರಕಟಿತ ಲೇಖನ) ಉಡುಪಿ.

4. ಚಂದ್ರಶೇಖರ ಕಂಬಾರ (ಸಂ)., 1985. ಕನ್ನಡ ಜಾನಪದ ವಿಶ್ವಕೋಶ, ಬೆಂಗಳೂರು : ಕನ್ನಡ ಸಾಹಿತ್ಯ ಪರಿಷತ್ತು.

5. ಚಿನ್ನಪ್ಪಗೌಡ. ಕೆ., 1990. ಭೂತಾರಾಧನೆ, ಮಂಗಳಗಂಗೋತ್ರಿ : ಮದಿಪು ಪ್ರಕಾಶನ.

6. ವಾಸುದೇವ ಲಕ್ಷ್ಮಣ ಶಾಸ್ತ್ರೀ ಪಣೀಕರ್ (ಸಂ)., 1925. ದಶಕುಮಾರ ಚರಿತಂ, (ಮಹಾಕವಿದಂಡಿ) ಮುಂಬಯಿ : ನಿರ್ಣಯ ಸಾಗರ ಮುದ್ರಣ.

7. ನರಸಿಂಹ ಶಾಸ್ತ್ರೀ ದೇವುಡು, ಶಿವಮೂರ್ತಿ ಶಾಸ್ತ್ರೀ.ಬಿ. (ಸಂ), 1956. ಮಹಾಕವಿ ಲಕ್ಷ್ಮೀಶ ವಿರಚಿತ ಕನ್ನಡ ಜೈಮಿನಿ ಭಾರತ, ಬೆಂಗಳೂರು : ಮೈಸೂರು ಸಂಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ.

8. ನಾಗರಾಜಯ್ಯ ಹಂಪ (ಸಂ)., 1982. ಪೊನ್ನಕವಿ ವಿರಚಿತ ಶಾಂತಿಪುರಾಣಂ, ಬೆಂಗಳೂರು : ಕನ್ನಡ ಸಾಹಿತ್ಯ ಪರಿಷತ್ತು.

9. ನಾವಡ. ಎ.ವಿ., ಶುಭಾಶ್ಚಂದ್ರ (ಅನು) 1987. ತುಳುವ ದರ್ಶನ, (ಪೀಟರ್ ಜೆ. ಕ್ಲಾಸ್) ಕುಂದಾಪುರ : ಪ್ರಾದೇಶಿಕ ವ್ಯಾಸಂಗ.

10. ನಿರಂಜನ ವಾನಳ್ಳಿ, (ಲೇ), 1992. ಯಂಕಾ ಮಂಕಾ ಕೇಳಿ ಅಂಕ, ಮಣಿಪಾಲ : ತರಂಗ ವಾರಪತ್ರಿಕೆ.

11. ಬಸವಾರಾಧ್ಯ. ಎನ್., ಪಂಡಿತ ಎಸ್. ಬಸಪ್ಪ, 1925. ರಾಘವಾಂಕ ವಿರಚಿತ ಹರಿಶ್ಚಂದ್ರ ಕಾವ್ಯಂ, ಮೈಸೂರು : ಪ್ರಾಚ್ಯ ಕಾವ್ಯ ಪ್ರಕಾಶ ಮಂದಿರ.

12. ಮುರಕಿಣಿ ಎಂ.ಬಿ., 1953. ರೂಪರಾಶಿಗಳ ಸಂತೆ, ಪುತ್ತೂರು : ಜನಪ್ರಿಯ ಸಾಹಿತ್ಯ.

13. ರಸಿಕ ಪತ್ರಿಗೆ, 1982. ಕಂಬಳ – ಕೋಳಿಅಂಕ, ಬೆಂಗಳೂರು : ಐಬಿಎಚ್ ಪ್ರಕಾಶನ.

14. ವಾಮನ ನಂದಾವರ, 1990. ಸಿಂಗದನ, ಕಾಟಿಪಳ್ಳ : ಹೇಮಾಂಶು ಪ್ರಕಾಶನ.

15. ವಿವೇಕ ರೈ. ಬಿ.ಎ., 1977. ತೌಳವ ಸಂಸ್ಕೃತಿ, ಮೈಸೂರು : ಸಹ್ಯಾದ್ರಿ ಪ್ರಕಾಶನ.

16. ವಿವೇಕ ರೈ ಬಿ.ಎ., 1985. ತುಳು ಜನಪದ ಸಾಹಿತ್ಯ, ಬೆಂಗಳೂರು : ಕನ್ನಡ ಸಾಹಿತ್ಯ ಪರಿಷತ್ತು.

17. ವೆಂಕಟಸುಬ್ಬಯ್ಯ ಜಿ., (ಸಂ), 1976. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು, ಎರಡನೆಯ ಸಂಪುಟ, ಬೆಂಗಳೂರು : ಕನ್ನಡ ಸಾಹಿತ್ಯ ಪರಿಷತ್ತು.

18. ? , 1993. ಶಾಸ್ತ್ರೋಕ್ತ ಕುಕ್ಕುಟ ಪಂಚಾಂಗ (ಹದಿನಾಲ್ಕನೆಯ ಆವೃತ್ತಿ), ಮಂಗಳೂರು : ನಿತ್ಯಾನಂದ ಗ್ರಂಥಾಲಯ.

19. ಶ್ಯಾಮಶಾಸ್ತ್ರೀ. ಆರ್., 1926. ಗೋವಿಂದ ವೈದ್ಯಕವಿ ವಿರಚಿತ ಕಂಠೀರವ ನರಸರಾಜ ವಿಜಯಂ, ಮೈಸೂರು : ಮೈಸೂರು ವಿಶ್ವ ವಿದ್ಯಾಲಯ.

20. ಶಿವರಾಮ ಶೆಟ್ಟಿ, 1989. ಕೋಳಿ ಅಂಕ, ಮೈಸೂರು : ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ.

21. ಶ್ರೀಧರಮೂರ್ತಿ. ಮ., 1980. ವಾತ್ಸ್ಯಾಯನನ ಕಾಮಸೂತ್ರ, ಬೆಂಗಳೂರು : ಪುನರ್ವಸು ಪ್ರಕಾಶನ.

22. ನಿರಂಜನ., (ಪ್ರ.ಸಂ.), 1973. ಜ್ಞಾನಗಂಗೋತ್ರಿ – ಸಂಪುಟ ಆರು, ಬೆಂಗಳೂರು : ಕರ್ನಾಟಕ ಸಹಕಾರಿ ಪ್ರಕಾಶನ.

23. ಸುಬ್ಬಣ್ಣ ರೈ.ಎ., 1994. ದ.ಕ. ಜಿಲ್ಲೆಯ ಐತಿಹ್ಯಗಳು, ಮಾಣಿ : ಮಾಣಿ ಜೂನಿಯರ್ ಛೇಂಬರ್.

24. ಸೂರ್ಯನಾಥ ಯು. ಕಾಮತ್, (ಸಂ) 1984. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ (ಭಾಗ ಒಂದು), ಬೆಂಗಳೂರು : ಕರ್ನಾಟಕ ಗ್ಯಾಸೆಟಿಯರ್ ಇಲಾಖೆ.

## 3.2: ಇಂಗ್ಲಿಷ ಗ್ರಂಥಗಳು.


1) Bhaskeranand Saletore, 1936. Ancient Karnataka Vol. I History of Tuluva, Poona; Oriental Book Agency.

2) Bucher J. Rev., 1983. Bucher's Kannada-English Dictionary, New Delhi: Asian Educational Services.

3) Clifford Geertz, 1973. "Notes on the Baliness Cock fight". (The Interpretation of Cultures) New York: Basic Books, Inc., Publishers.

4) Geneh. Roghair, 1982, "The Cock Fight" (The Epic of Palnadu) Oxford: Clarendon Press.

5) Krishnayya S.A, 1993. "Cock Fight" (Unpublished).Udupi.

6) Mariappa Bhat M. Shanker Kedilaya A., 1967. Tulu-English Dictionary, Madras: University of Madras.

7) Mariappa Bhat M.. 1977. Kittel's Kannada-English Dictionary Vol.II Madras University of Madras.

8) Richard Carnal Temple..(Editor) 1985. The Indian Antiquary: Vol. XXIII (1894). Delhi: Susati Publications.

9) Robert Mcttenry., (Editor) 1992. The New Eneyelopaedia Britannica Vol.3,Miceopaedia. Chicago: The University of Chicago.

10) Sainath P., 1994. "Fowl Play",(The sunday times April -17th) New Delhi.

11) Svkes J.B., (Editor) 1986. The Concise Oxford Dictionary of current Enlish. Delhi: Oxford Universitv Press.

12) Krishnamurthy Hanoor., 1991. Encvclopaedia of the Folk Culture of Karnataka, Vol.I Madras: Institute of Asian studies Thiruvanniyur.



ಅಂಕದ ಕೋಳಿ



ಹಿಂದಿನ ಕಾಲದಲ್ಲಿ ಕೋಳಿಗಳನ್ನು ಕಾಳಗಕ್ಕೆ
ಒಂತೊಯ್ಯುತ್ತಿದ್ದ ಬುಟ್ಟಿ (ತೊಟ್ಟೆ).

ಅಂಕಕ್ಕಾಗಿ ಬಂದ ಕೋಳಿಗಳ ದೃಶ್ಯ.



ಕೋಳಿಗಳನ್ನು ಪತಿ ಮಾಡುತ್ತಿರುವುದು.

ಅಂಕಕ್ಕಾಗಿ ಬಂದ ಕೋಳಿಗಳ ದೃಶ್ಯ.



ಕೋಳಿಗಳನ್ನು ಪತಿ ಮಾಡುತ್ತಿರುವುದು.



ಕೋಳಿಯ ಕಾಲಿಗೆ ಬಾಳು ಕಟ್ಟುತ್ತಿರುವುದು.





ಕೋಳಿಯ ಕಾಲಿಗೆ ಬಾಳು ಕಟ್ಟುತ್ತಿರುವುದು.





ಕೋಳಿಗಳನ್ನು ಕಾಳಗಕ್ಕೆ ಒಡ್ಡಿಸುತ್ತಿರುವುದು.



ಕೋಳಿಅಂಕ ನಡೆಯುತ್ತಿರುವ ದೃಶ್ಯ.



ಕೋಳಿಗಳನ್ನು ಕಾಳಗಕ್ಕೆ ಒಡ್ಡಿಸುತ್ತಿರುವುದು.



ಕೋಳಿಅಂಕ ನಡೆಯುತ್ತಿರುವ ದೃಶ್ಯ.



ಅಂಕದಲ್ಲಿ ಸೋತ – ಸತ್ತ ಕೋಳಿಗಳು.



ಕೋಳಿಅಂಕಕ್ಕೆ ಸೇರಿದ ಜನರ ಒಂದು ದೃಶ್ಯ.



ಅಂಕದಲ್ಲಿ ಸೋತ – ಸತ್ತ ಕೋಳಿಗಳು.



ಕೋಳಿಅಂಕಕ್ಕೆ ಸೇರಿದ ಜನರ ಒಂದು ದೃಶ್ಯ.



ಬಾಳಸಾಡಿ (ಬಾಳುಗಳ ಕಟ್ಟು) ಮತ್ತು ಬಾಳು ಕಟ್ಟುವವರು



